# ಮನಸಿ

ತಿಂಗಳ ಪತ್ರಿಕೆ. ನವೆಂಬರ್ ೧೯೪೯



# ಮಾನಸ

ಸಂಪುಟ : ೨ ಸಂಚಿಕೆ ೯
ನವೆಂಬರ್ ೧೯೮೯

**ಸಂಪಾದಕೀಯ ಮಂಡಳಿ**
ರಾಜೇಶ್ವರಿ ಎಚ್. ಎಸ್., ಸರಸ್ವತಿ ದು.,
ಚಂಪಾವತಿ ಎಚ್. ಎಸ್.,
ಸವಿತ ಎ., ಗೀತಾ ಜಿ. ಎಸ್.

**ಸಲಹೆ—ಸಹಕಾರ**
ಇಳಾವಿಜಯ

**ವಿಳಾಸ "ಮಾನಸ ತಿಂಗಳ ಪತ್ರಿಕೆ"**
ಪಂಚಾಯಿತಿ ರಸ್ತೆ
ಕಾಡುಗೋಡಿ ( ಪೊ. )
ಬೆಂಗಳೂರು—**560-067**.

**ಬಿಡಿಪ್ರತಿ: 2 ರೂ.**
**ಸೂಚನೆ:** ವಾರ್ಷಿಕ ಚಂದಾ :**20**ರೂ.
ಆಜೀವ ಚಂದಾ :**250**ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.

ಈ ಸಂಚಿಕೆಯಲ್ಲಿ..........,...



ಮುಖಪುಟ : ಧನಲಕ್ಷ್ಮಿ



# ಸಂಪಾದಕೀಯ

ದಿನನಿತ್ಯ ಜೀವನದಲ್ಲಿ ಹೆಣ್ಣೆಂಬ ತಾರತಮ್ಯಕ್ಕೆ ಒಳಗಾಗಿ ನ್ಯಾಯಬದ್ಧವಾದ ಸ್ಥಾನಗಳಿಂದ ವಂಚಿತರಾದಂತೆ ಸ್ತ್ರೀಯರು ಇತಿಹಾಸದಲ್ಲಿ ತಮಗೆ ದೊರಕಬೇಕಾದ ಸೂಕ್ತ ಸ್ಥಾನಗಳಿಂದ ವಂಚಿತರಾಗಿದ್ದಾರೆ. ಇತಿಹಾಸದ ಯಾವುದೋ ನಿರ್ಣಾಯಕ ಹಂತದಲ್ಲಿ ಪ್ರಮುಖ ಪಾತ್ರ ವಹಿಸಿದ ಮಹಿಳೆಯರನ್ನು ಉದ್ದೇಶಪೂರ್ವಕವಾಗಿಯೇ ನಿರ್ಲಕ್ಷಿಸಲಾಗಿದೆ. ಇನ್ನು ಇತಿಹಾಸದ ಜನಪ್ರಿಯ ಹೋರಾಟಗಳಲ್ಲಿ ಭಾಗವಹಿಸಿದ ಜನಸಾಮಾನ್ಯ ಮಹಿಳೆಯರ ಚೈತನ್ಯವನ್ನು ದಾಖಲಿಸುವುದನ್ನು ನಿರೀಕ್ಷಿಸುವುದು ಅಸಾಧ್ಯ.

ಇಂತಹ ಚಟುವಟಿಕೆಗಳಲ್ಲಿ ಬಹುಪಾಲು ಮಹಿಳೆಯರು ಭಾಗವಹಿಸಿದ್ದರು, ಸಕ್ರಿಯವಾಗಿ ಭಾಗವಹಿಸಿದ ಮಹಿಳೆಯರ ಅನುಭವ ಶ್ರೀಮಂತಿಕೆಯನ್ನು ತಳ್ಳಿಹಾಕಲು ಸಾಧ್ಯವಿಲ್ಲ. ತೆಲಂಗಾಣ ಹೋರಾಟದಲ್ಲಿ ಭಾಗವಹಿಸಿದ ಮಹಿಳೆಯರೇ ಇದಕ್ಕೆ ಉತ್ತಮ ನಿದರ್ಶನ. ಇಂತಹ ಹೋರಾಟಗಳಲ್ಲಿ ಭಾಗವಹಿಸಿದ ಮಹಿಳೆಯರ ಅದಮ್ಯ ಚೇತನಗಳನ್ನು ಹತ್ತಿಕ್ಕಿರುವುದು ಒಂದು ಘೋರ ಅಪರಾಧ.

ಇತಿಹಾಸ ಪುರುಷ ನಿರ್ಮಿತವಾದುದರಿಂದ ಇತಿಹಾಸದ ದಾಖಲೆಗಳಲ್ಲಿ ಪುರುಷ ಪ್ರಧಾನ ಮೌಲ್ಯಗಳು ಪ್ರತಿಬಿಂಬಿತವಾಗಿವೆ. ಮಹಿಳೆಯರಿಗೆ ದೊರಕಬೇಕಾದ ಪ್ರಾಶಸ್ತ್ಯದಿಂದ ವಂಚಿತರಾಗಲು ಕಾರಣ ಈ ಪುರುಷ ಪ್ರಧಾನ ಸಂಸ್ಕೃತಿಯೊಂದಿಗೆ ಐತಿಹಾಸಿಕವಾಗಿ ಬೆಳೆದು ಬಂದಿರುವ ಪೂರ್ವಗ್ರಹ ಪೀಡಿತ ಮೌಲ್ಯಗಳು.

ಇದರಿಂದ ಮಹಿಳೆಯರಿಗೆ ಮಾತ್ರ ಅಪಚಾರ ಉಂಟಾಗಿದೆಯೆಂದಲ್ಲ. ಮಹಿಳೆಯರ ಗೊಂದಲಗಳು, ದ್ವಂದ್ವಗಳು ಕೌಟುಂಬಿಕ ಹಿನ್ನೆಲೆಯಲ್ಲಿ ಅವರಿಗುಂಟಾದ ಸಮಸ್ಯೆಗಳು, ಭಾವನಾತ್ಮಕ ನೆಲೆಗಳು, ಸದವಕಾಶಗಳ ಧೋರಣೆ, ಹೋರಾಟಗಳ ನಂತರ ಅವರ ಪಾತ್ರ ಮುಂತಾದವುಗಳು ಒಂದು ಚಳವಳಿಯ ರೂಪುರೇಶೆ, ನೆಲೆಬೆಲೆ, ಸೈದ್ಧಾಂತಿಕ ಪ್ರಶ್ನೆಗಳನ್ನು ದಾಖಲಿಸುವಲ್ಲಿ ಗಣನೀಯವಾದ ಅಂಶಗಳಿರುತ್ತವೆ! ಚರಿತ್ರೆಗಳಲ್ಲಿ ಹುಗಿದು ಹೋಗಿರುವ ಇಂತಹ ಚೇತನಗಳನ್ನು ಇಂದು ಹುಡುಕಿ ಹೆಕ್ಕಬೇಕಾಗಿದೆ. ಒಡಲಾಳದಿಂದ ಮೂಡಿಬಂದ ಇಂತಹ ಪ್ರಶ್ನೆಗಳು, ನಾವು ತುಳಿಯು ಹಾದಿಯುವ ಕೈದೀವಟಿಗೆಗಳಾಗಬಲ್ಲವು.

# ಚರಿತ್ರೆ ಮರೆತ ರಾಜತಂತ್ರಜ್ಞೆ : ತಾರಾಬಾಯಿ

ಅಂಧಕಾರ ಕವಿದು ನಿರಾಶೆಯ ಮಬ್ಬಿನಲ್ಲಿದ್ದ ದೇಶದ ರಾಜಕೀಯ ಕ್ಷಿತಿಜದಲ್ಲಿ ಆಸೆಯ ಕಿರಣ, ಧೈರ್ಯದ ಹೊಂಬೆಳಕನ್ನು ಸೂಸುತ್ತಾ ತಾರಾಬಾಯಿ ನಕ್ಷತ್ರದಂತೆ ಉಜ್ವಲ ಪ್ರಕಾಶದಿಂದ ಉದಯಿಸಿದ್ದಳು. ಶಿವಾಜಿಯ ನಂತರ ಮೊಘಲ್ ಚಕ್ರವರ್ತಿಯ ವಿರುದ್ಧ ನಡೆದ ಸ್ವಾತಂತ್ರ್ಯ ಹೋರಾಟಕ್ಕೆ ಮಾರ್ಗದರ್ಶನ ನೀಡಿ ಆಡಳಿತದಲ್ಲೂ, ರಾಜಕೀಯ ಕೌಶಲ್ಯಕ್ಕೂ ಹೆಸರಾದ ತಾರಾಬಾಯಿಯ ಬದುಕು ಸಂಪೂರ್ಣ ಸಂಕೀರ್ಣದಿಂದ ಕೂಡಿತ್ತು. ಏಳು ದಶಕಗಳಿಗೂ ಮೀರಿ ಕಾರ್ಯ ಚಟುವಟಿಕೆಯಲ್ಲಿ ತೊಡಗಿದ ತಾರಾಬಾಯಿಗೆ ಬಯಸಿದ ಫಲ ಸಿಗಲಿಲ್ಲ. ದೇಶಭಕ್ತಿ, ಸಾಹಸ, ಒಳಸಂಚು, ತಂತ್ರಗಳು, ದ್ವಂದ್ವ ಪ್ರವೃತ್ತಿಗಳಿಂದ ಕೂಡಿದ ಅವಳ ವ್ಯಕ್ತಿತ್ವ ಆಕೆಯ ಹಿತೈಷಿಗಳಿಗೂ ನಿಗೂಢವೆನಿಸಿತ್ತು. ಇತಿಹಾಸದ ಘಟನೆಗಳಲ್ಲಿ ಮಹತ್ವದ ಪಾತ್ರವಹಿಸಿದ ಈ ಹೆಣ್ಣಿನ ಬಗ್ಗೆ ಇತಿಹಾಸ ಸಂಪೂರ್ಣವಾಗಿ ನಿರ್ಲಕ್ಷಿಸಿದೆ. ಸಾಹಸಮಯ ಹಾಗೂ ವೈರುಧ್ಯ ವ್ಯಕ್ತಿತ್ವದ ತಾರಾಬಾಯಿ ಚರಿತ್ರೆಯಲ್ಲಿ ದಾಖಲಾಗದಿರುವುದು ಉದ್ದೇಶಪೂರ್ವಕವೇ ಅಥವಾ ಆಕಸ್ಮಿಕವೇ?

ಛತ್ರಪತಿ ಶಿವಾಜಿಯ ಸೇನಾಪತಿ - ಹನ್ಸಾಜಿ ಮೋಹಿತೆಯ ಮಗಳು ತಾರಾಬಾಯಿ. ಪ್ರತಾಪ್‌ರಾವ್‌ಗುಜಾರ್‌ರ ಮರಣದ ನಂತರ ಶಿವಾಜಿ ಹನ್ಸಾಜಿಯನ್ನೇ ತನ್ನ ಸೇನಾನಿಯನ್ನಾಗಿ ನೇಮಿಸಿ ಹನ್ಸಾಜಿಗೆ ಹಂಬೀರ್‌ರಾವ್ ಎಂದು ನಾಮಕರಣ ಮಾಡಿದ್ದ. ತಾರಾಬಾಯಿಯ ಮೊದಲಿನ ಹೆಸರು ಸೀತಾಬಾಯಿ. ಸೀತಾಬಾಯಿಯು ಮದುವೆಯಾದದ್ದು ಛತ್ರಪತಿ ಶಿವಾಜಿಯ ಕೊನೆಯ ಅಚ್ಚುಮೆಚ್ಚಿನ ಮಗ ರಾಜಾರಾಂನನ್ನು. ಶಿವಾಜಿ ತಾನು ಬದುಕಿದ್ದಾಗಲೇ ತನ್ನ ಪ್ರಿಯಪುತ್ರ ರಾಜರಾಮನಿಗೆ ಪ್ರತಾಪ್‌ರಾವ್ ಗುಜಾರ್ (ಸೇನಾಪತಿ) ಮಗಳು ಜಾನಕೀಬಾಯಿಯೊಂದಿಗೆ ಅತ್ಯಂತ ವೈಭವದಿಂದ ವಿವಾಹ ನೇರವೇರಿಸಿದ್ದ. ಈ ವಿವಾಹವಾದ ೨೫ ದಿನಗಳಲ್ಲೇ ಕಾಲವಾದ ಛತ್ರಪತಿ ಮಹಾರಾಜ. ನಂತರ ನಡೆದ ರಕ್ತಪಾತ, ಒಳಸಂಚು ಹಿಂದೆಂದು ಮರಾಠ ಇತಿಹಾಸದಲ್ಲಿ ನಡೆದಿರಲಿಲ್ಲ. ಶಿವಾಜಿಯ ಮತ್ತೊಬ್ಬ ಮಗ ಶಂಭೂಜಿ ರಾಜರಾಂ, ಹೊಸ ಮದುವಣಗಿತ್ತಿ ಜಾನಕಿಬಾಯಿ ಇಬ್ಬರನ್ನೂ ವಿದ್ರೋಹದ ಆಪಾದನೆ ಮೇಲೆ ಸೆರೆಮನೆಗೆ ತಳ್ಳಿದ. ರಾಜಾರಾಂನ ತಾಯಿಗೆ ಮರಣದಂಡನೆ ವಿಧಿಸಿದ ನಂತರ ಜಾನಕೀಬಾಯಿ ತನ್ನ ಎಳೆಗೂಸು ಸಾವಿತ್ರಿಯನ್ನು ಬಿಟ್ಟು ಅವಸಾನ ಹೊಂದಿದಳು. ನಾಲ್ಕು ಗೋಡೆಗಳ ನಡುವೆ ಬಂಧಿತನಾಗಿದ್ದ ರಾಜಾರಾಂ ಒಂಟಿತನದ ಬೇಸರದಲ್ಲಿ ರಾಜಕೀಯ ಒಳಸಂಚಿನಲ್ಲಿ ಪಾಲ್ಗೊಳ್ಳದಿರಲೆಂದು ಶಂಭೂಜಿ ಅವನಿಗೆ ಎರಡು ಮದುವೆ ಮಾಡಿಸಿದ - ಮೊದಲನೆಯವಳೇ ಸೀತಾಬಾಯಿ - ಗಂಡನ ಮನೆಯಲಿಟ್ಟ ಹೆಸರು ತಾರಾಬಾಯಿ. ಎರಡನೇಯವಳು ರಜಸ್‌ಬಾಯಿ. ಸ್ವಲ್ಪಕಾಲದ ಮೇಲೆ ಸ್ತ್ರೀವ್ಯಾಮೋಹವಿದ್ದ ರಾಜಾರಾಂನಿಗೆ ಅಂಬಿಕಾಬಾಯಿಯೊಡನೆ ಮೂರನೇ ಮದುವೆಯಾಗುತ್ತದೆ.

ತಾರಾಬಾಯಿ ಹೆಸರಿಗೆ ತಕ್ಕಂತೆ ಉಜ್ವಲ ಸೌಂದರ್ಯ, ಲಾವಣ್ಯ ಹೊಂದಿದ್ದಳು. ಅವಳ ವ್ಯಕ್ತಿತ್ವದಲ್ಲಿ ಮನೆಮಾಡಿದ್ದ ಗಡಸುತನ, ಛಲ, ಅಧಿಕಾರ ಚಲಾಯಿಸುವ ಪ್ರವೃತ್ತಿಯೂ ಅವಳಿಗೆ ಶೋಭೆಯಾಗಿತ್ತು. ಅವಳಿಗೆ ಮದುವೆಯಾಗುವಾಗ ೮ ವರ್ಷ ರಾಜಾರಾಂ ಅವಳಿಗಿಂತ ೫ ವರ್ಷಕ್ಕೆ ಹಿರಿಯವ. ಮದುವೆಯೊಂದಿಗೆ ಪ್ರಾರಂಭವಾದ ಸೆರೆವಾಸ, ಒಂದೆಡೆಯಿಂ ಮತ್ತೊಂದೆಡೆಯ ಸೆರೆಗೆ ವರ್ಗಾವಣೆಗಳು ಇವು ಶಂಭೂಜಿಯ ಮರಣದವರೆಗೂ ನಡೆದೇ ಇತ್ತು. ತನ್ನ ಅತ್ತೆಗೆ ಆದಂತಹ ಅನ್ಯಾಯ ತನಗಾಗುವುದನ್ನು ಇಚ್ಛಿಸದ ತಾರಾಬಾಯಿಗೆ ತನಗಿಂತ ಮೊದಲು ತನ್ನ ಸವ

ಯರಿಗೆ ಸಿಂಹಾಸನದ ವಾರಸುದಾರ ಹುಟ್ಟಿದರೆ........ ಎಂಬ ಆತಂಕವಿದ್ದೇ ಇತ್ತು, ತಾರಾಬಾಯಿಯೇ ಮೊದಲ ಗಂಡು ಮಗುವಿನ ತಾಯಿಯಾದರೂ, ಅವಳ ಸಾಧನೆಯ ಹಾದಿ ಸುಗಮವಾಗಿರಲಿಲ್ಲ. ತಾಯಾಗುವ ಮುನ್ನ ಪತಿಯ ಭವಿಷ್ಯದ ಚಿಂತನೆ, ನಂತರ ಪುತ್ರನ ಪುರೋಭಿವೃದ್ಧಿಗೆ ತನ್ನಿಡೀ ಜೀವಮಾನವನ್ನೆಲ್ಲ ಸವೆಸುವ ತಾರಾಬಾಯಿ ಮೊಘಲ್ ಚಕ್ರವರ್ತಿ ಔರಂಗಜೇಬನಿಗೆ ಪ್ರಬಲ ವೈರಿಯಾಗಿದ್ದಳು. ಈಕೆಯ ರಾಜಕೀಯ ಚತುರತೆ, ನೈಪುಣ್ಯಗಳು ಶತ್ರುಗಳ ಮೆಚ್ಚುಗೆ, ಗೌರವಗಳಿಗೆ ಕಾರಣವಾಗಿತ್ತು. ಮರಾಟ ಅಧಿಪತ್ಯವನ್ನು ನಾಶಮಾಡುವ ಗುರಿಯಿಟ್ಟುಕೊಂಡಿದ್ದ ಔರಂಗಜೇಬನಿಂದ ಅರಸೊತ್ತಿಗೆ ಉಳಿಸಿದ ತಾರಾಬಾಯಿ ಮರಾಟರಿಗೆ ಪ್ರತ್ಯಕ್ಷ ದೇವತೆಯಂತಿದ್ದಳು.

ಸರ್ವಾಧಿಕಾರಿಯಾಗಿದ್ದ ಶಂಭೂಜಿ ತನ್ನ ತಂದೆ ಆದರಿಸುತಿದ್ದ ಹಿರಿಯ ನೀತಿಜ್ಞರನ್ನು ಕಡೆಗಣಿಸಿದ್ದ. ಕೆಲವರನ್ನು ಸೆರೆಗೂ ತಳ್ಳಿದ್ದ. ಯುದ್ಧದಲ್ಲಿ ಮೋಹಿತೆ ಪ್ರಾಣ ನೀಗಿದ ಮೇಲೆ ಸುಲಭವಾಗಿ ಮೊಘಲರಿಗೆ ಸೆರೆಯಾದ ಶಂಭೂಜಿ ನಂತರ ಔರಂಗಜೇಬನಿಂದ ದಾರುಣವಾಗಿ ಕೊಲೆಯಾದ. ಸೆರೆ ಸಿಕ್ಕ ಸುದ್ದಿ ಬಂದ ಕ್ಷಣವೇ ರಾಜಾರಾಂ ಮತ್ತಿತರರನ್ನು ಬಂಧಮುಕ್ತಗೊಳಿಸಿದ ನಾಯಕರುಗಳು ಅವನನ್ನ ರಾಜ ಪ್ರತಿನಿಧಿಯನ್ನಾಗಿ ನೇಮಿಸುತ್ತಾರೆ. ವರಿಷ್ಟರ ಸಲಹೆಯಂತೆ ಮೊಘಲರಿಂದ ತಪ್ಪಿಸಿಕೊಂಡು ಜಿಂಜಿ ತಲುಪುವ ವೇಳೆಗೆ ಶಂಭೂಜಿಯ ಮಗ ಮತ್ತು ಉತ್ತರಾಧಿಕಾರಿಯಾದ ಶಾಹು ತನ್ನ ತಾಯಿಯೊಂದಿಗೆ ಮುಘಲ್ ಸೇನಾನಿ ಜುಲ್‌ಫಿಕರ್ ಖಾನನ ಸೆರೆಯಾಗುತ್ತಾರೆ. ಮಹಾರಾಷ್ಟ್ರ ಬಿಡುವ ಮುನ್ನ ಸಂಸ್ಥಾನದ ಆಡಳಿತವನ್ನು ಪರಿಸ್ಥಿತಿಯ ಒತ್ತಡದಿಂದಾಗಿ ಶಿವಾಜಿಯ ಮನೆತನದ ಹಿರಿಯಳಾಗಿದ್ದ ತಾರಾಬಾಯಿಗೆ ವಹಿಸಿ, ಆಕೆಯ ಬೆಂಬಲಕ್ಕೆ ಪ್ರಧಾನ ರಾಮಚಂದ್ರ ನೀಲಕಾಂತನನ್ನು ನೇಮಿಸುತ್ತಾನೆ ರಾಜಾರಾಂ. ಅಗ ಆಕೆಗೆ ಕೇವಲ ೧೪ವರ್ಷ. ಪ್ರಧಾನನೊಡಗೂಡಿ ಛತ್ರಪತಿ ಮನೆತನದ ಏಳಿಗೆಗಾಗಿ ಶ್ರಮಿಸಿ, ಶಾಹುವಿನ ಬಿಡುಗಡೆಗಾಗಿ ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಳು. ತನ್ನ ಸೂಕ್ಷ್ಮಮತಿ, ಜಾಣತನಗಳಿಂದ ಎಲ್ಲರ ಆದರಕ್ಕೆ ಪಾತ್ರಳಾಗುವ ತಾರಾಬಾಯಿ ತಾನು ತಾಯಿಯಾದ ಮೇಲೆ ಪತಿಯ ಮರಣದ ನಂತನ್ನ ಮಗನ ಅಧಿಕಾರಕಾರಕ್ಕಾಗಿ ಸಂಚೆಸಗುವಳು.

ಜಿಂಜಿ ತಲುಪಿದ ರಾಜಾರಾಂ ವಿಶಾಲಘಢದಲ್ಲಿದ್ದ ತನ್ನ ಪತ್ನಿಯರನ್ನು ಸಂಪೂರ್ಣ ಮರೆತಿದ್ದಲ್ಲದೆ ವಿವಾಹ ಬಾಹಿರ ಸಂಬಂಧದ ಚೆಂದದ, ಮೋಹದ ಮಗ ಕರ್ಣನೇ ಮುಂದಿನ ರಾಜಪ್ರತಿನಿಧಿಯೆಂದು ಘೋಷಿಸುವಲ್ಲಿಗೆ ತಲುಪಿದ್ದ. ಇದನ್ನು ಸಹಿಸದ ಸಚಿವರು, ಹಿತೈಷಿಗಳು ಆತನ ಪತ್ನಿಯರನ್ನು ಸಮುದ್ರದ ಮೂಲಕ ಗುಪ್ತವಾಗಿ ಜಿಂಜಿಗೆ ಕರೆಸುತ್ತಾರೆ. ಓರಗೆಯವರೊಂದಿಗೆ ೧೬೯೪ರಲ್ಲಿ ಜಿಂಜಿಗೆ ಬಂದ ತಾರಾಬಾಯಿ ೧೬೯೬ರಲ್ಲಿ ಗಂಡುಮಗುವಿನ ತಾಯಿಯಾಗುತ್ತಾಳೆ. ಮಾವನ ಹೆಸರನ್ನೇ-ಶಿವಾಜಿ **111** ಎಂದಿಟ್ಟು ಮಾವನಂತೆಯೇ ಮಹಾಪುರುಷನನ್ನಾಗಿಸುವ ಗುರಿ ಹೊಂದಿರುತ್ತಾಳೆ. ಈ ಮಧ್ಯೆ ರಾಜಾರಾಂನ ಯಶಸ್ಸಿಗೆ ತಾನೆ ಕಾರಣ ಎಂದು ಮೆರೆಯುತ್ತಿದ್ದ ಸೇನಾನಿ ಸಂತಾಜಿಯನ್ನು ರಾಜಕೀಯ ಬೆಂಬಲದಿಂದ ಮತ್ತೊಬ್ಬ ಸೇನಾಪತಿ ಧನಾಜಿ ಕೊಲೆಮಾಡಿದ್ದು ಒಳಜಗಳಗಳಿಗೆ ದಾರಿಯಾಗುತ್ತದೆ, ಜೊತೆಗೆ ಮೊಘಲ್ ಸೇನಾನಿ ಜುಲ್‌ಫಿಕರ್ ಖಾನ್ ೨ನೇ ಬಾರಿಗೆ ಮುತ್ತಿಗೆ ಹಾಕಿ ಜಿಂಜಿಯನ್ನು ಗೆಲ್ಲುತ್ತಾನೆ. ರಾಜಾರಾಂ ತಪ್ಪಿಸಿಕೊಂಡರೂ ಸೆರೆಸಿಕ್ಕ ಅವನ ಕುಟುಂಬವನ್ನು ಬಿಡುಗಡೆ ಮಾಡಲಾಯಿತು.

ಮಹಾರಾಷ್ಟ್ರ ಸೇರಿದ ರಾಜಾರಾಂ ಚೆದುರಿದ್ದ ಸೈನ್ಯ ಸೇರಿಸಿ ಔರಂಗಜೇಬನೊಂದಿಗೆ ಸಮರಕ್ಕಿಳಿಯುತ್ತಾನೆ. ಸರದಾರರಿಗೆ ಹೆಚ್ಚಿನ ಜಹಗೀರು, ವರ್ತನಗಳನ್ನು ನೀಡಿ ಅವರ ಬೆಂಬಲ ಪಡೆದು ಯುದ್ಧ ಮಾಡುತ್ತಿದ್ದಾಗಲೇ ಖಾಯಿಲೆಯಿಂದ ಅಸುನೀಗಿದ ರಾಜಾರಾಮನ ಅಪೇಕ್ಷೆಯಂತೆ ಕರ್ಣ ಮುಂದಿನ ವಾರಸುದಾರನಾದುದು ಬಹಳಷ್ಟು ಮಂದಿಗೆ ಅಸಮಾಧಾನವಾದರೂ ಕರ್ಣ ಸಿಡುಬಿನಿಂದ ಸಾವನ್ನಪ್ಪಿದುದು ಎಲ್ಲ ಸಮಸ್ಯೆಗಳಿಗೂ ಕೊನೆಯಾಯಿತು. ರಾಜಾರಾಂನ ಮರಣದ ನಂತರ ಆತನ ಪತ್ನಿಯರು, ಅಪ್ರಾಪ್ತ ವಯಸ್ಸಿನ ಬಾಲಕರು ತನ್ನ ಆಶ್ರಯಕ್ಕೆ ಬರುವರೆಂದು ನಿರೀಕ್ಷಿಸಿದ್ದ ಔರಂಗಜೇಬನಿಗೆ ಸಡ್ಡು ಹೊಡೆದು ನಿಂತು ಪ್ರಬಲ ಪ್ರತಿಸ್ಪರ್ಧಿಯಾದವಳು ತಾರಾಬಾಯಿ. ಈಗ ತನ್ನ ಮಗನಿಗಾಗಿ ದುಡಿಯುತ್ತಿದ್ದ ತಾರಾಬಾಯಿ ಹಲವರ ವಿರೋಧವನ್ನು ಎದುರಿಸಬೇಕಾಯ್ತು. ಸ್ವಾಮಿನಿಷ್ಟನಾದ ನೀಲ್‌ಕಾಂತ ಪ್ರಧಾನ ಅಮಾತ್ಯನಿಗೆ ಎಲ್ಲ ಮರಾಠ ಸರದಾರರೂ, ನಾಯಕರುಗಳೂ ಸಹಕಾರ ಬೆಂಬಲವಿದ್ದಿತ್ತು. ತಾರಾಬಾಯಿ, ಸಿಂಹಾಸನ ಹಾಗೆಯೇ ಉಳಿಯಬಾರದು, ಅದರ ಅಧಿಕಾರಿಯನ್ನಾಗಿ ತನ್ನ ಮಗನನ್ನು ನೇಮಿಸಬೇಕೆಂದು ನೀಲ್‌ಕಾಂತಗೆ ತಿಳಿಸಿ

ದಾಗ ಆತ ಶಿವಾಜಿ111 ಗಿಂತಲೂ ಹಿರಿಯ ಶಾಹುವನ್ನು(೨೦)ಶತ್ರುವಿನ ಸೆರೆಯಿಂದ ವಿಮುಕ್ತಿಗೊಳಿಸಿ, ಅವನೊಂದಿಗೆ ಶಿವಾಜಿಗೂ ಉಪನಯನದ ವಿಧಿ ಪೂರೈಸಿ ಶಾಹು ರಾಜ, ಶಿವಾಜಿ ಯುವರಾಜನಾಗಿ ಇರುವ ವ್ಯವಸ್ಥೆಯನ್ನು ತಿಳಿಸಿದಾಗ ತಾರಾಬಾಯಿ ನೀಲ್‌ಕಾಂತ ಮೊಘಲರೊಡನೆ ಷಾಮೀಲಾಗಿರುವನೆಂದು ತಿಳಿದಳು. ಆಕೆಯ ವಾದ, ಶಾಹುವಿನ ತಂದೆ ಮೊಘಲರಿಗೆ ಸೋತಿದ್ದ ರಾಜ್ಯವನ್ನು ತನ್ನ ಪತಿ ಯುದ್ಧದೀದ ಪಡೆದುದರಿಂದ ಶಿವಾಜಿಯೇ ಸಿಂಹಾಸನದ ಹಕ್ಕುದಾರನೆಂಬುದು. ತನ್ನ ಉದ್ದೇಶ ಸಾಧನೆಗಾಗಿ ಯೋಧ ಹಾಗು ರಾಜನೀತಿಜ್ಞರೂ ಆದ ಪರಶುರಾಮ ತ್ರಿಂಬಕ್, ಶಂಕ್ರಾಜಿ ನಾರಾಯಣರ ಮನವೊಲಿಸುವಲ್ಲಿ ಯಶಸ್ವಿಯಾದಳಲ್ಲದೇ, ಈಕೆಯ ಆದೇಶದಂತೆ ನಡೆದುಕೊಳ್ಳುವಲ್ಲಿ ಸಂಸ್ಥಾನಕ್ಕೆ ಹಿತವಿದೆ ಎಂದು ಪ್ರಧಾನರನ್ನು ಅವರಿಬ್ಬರೂ ಒಪ್ಪಿಸಿದರು. ತಾರಾಬಾಯಿಯ ಇಚ್ಛೆಯಂತೆ ವಿಶಾಲಘಢದಲ್ಲಿ ಆಕೆಯ ೪ ವರ್ಷದ ಮಗನಿಗೆ ಉಪನಯನ ಮತ್ತು ರಾಜ್ಯಾಭಿಷೇಕವೂ ನಡೆಯಿತು. ತಾರಾಬಾಯಿ ಸಂಸ್ಥಾನದ ಎಲ್ಲ ಅಧಿಕಾರವನ್ನೂ ತಾನೆ ಇಟ್ಟುಕೊಂಡು ತನ್ನದೇ ಆದ ಪರಿವಾರವನ್ನೂ ಹೊಂದಿದ್ದಳು, ತನಗೆ ಅನುಕೂಲರಾಗಿದ್ದ ತ್ರಿಂಬಕ್‌ನನ್ನು ಪ್ರತಿನಿಧಿ, ಶಂಕ್ರಾಜಿ ಸಚಿವನಾಗಿ ನೇಮಿಸಿಕೊಂಡದ್ದರಿಂದ ನೀಲ್‌ಕಾಂತ್ ಪ್ರಭಾವ ಕಡಿಮೆಯಾಯಿತು.

ಮರಾಟ ಸಂಸ್ಥಾನ ಸ್ವತಂತ್ರವಾಗಿರಬೇಕೆಂಬ ಉದ್ದೇಶದಿಂದ ಔರಂಗಜೇಬನೊಡನೆ ಸಂಧಾನಕ್ಕಾಗಿ ಪ್ರಯತ್ನಿಸಿದಳು. ಮೇಲ್ನೋಟಕ್ಕೆ ವೃದ್ಧ ದೊರೆಯನ್ನು ಲೇವಡಿಮಾಡಲು, ಯುದ್ಧಕ್ಕೆ ಸಿದ್ಧತೆ ಮಾಡಿಕೊಳ್ಳಲು ಸಮಯ ದೊರಕಿಸಿಕೊಳ್ಳಲೆಂಬಂತೆ ಕಂಡರೂ, ತಾರಾಬಾಯಿಯ ಒಳಮನದಲ್ಲಿ ಸಂಧಾನ ಸಫಲವಾದರೆ ತನ್ನ ಮಗನಿಗೆ ಮುಂದೆ ದಕ್ಷಿಣದಲ್ಲಿ ದೇಶಮುಖನಾಗುವ ಅವಕಾಶ ದೊರಕೀತೆಂಬ ಆಕಾಂಕ್ಷೆಯಿದ್ದೇ ಇತ್ತು. ಆದರೆ ಔರಂಗಜೇಬ ಶತ್ರುವಿನ- ಸಂಪೂರ್ಣ ಶರಣಾಗತಿ ಆಶಿಸಿದ್ದನಾದ್ದರಿಂದ ಯುದ್ಧ ನಿಶ್ಚಯವಾಯಿತು.

ಇತಿಹಾಸಜ್ಞ ಕಾಫಿಖಾರ್ ಹೇಳುವಂತೆ – “ರಾಜಪ್ರತಿನಿಧಿಯ ತಾಯಿಯಾಗಿ, ತಾರಾಬಾಯಿ ಅಸಾಧ್ಯ ಕೌಶಲ್ಯ ತೋರಿಸಿದ್ದಳು. ಆಕೆ ಕುಶಾಗ್ರಮತಿಯ ಚತುರ ಮಹಿಳೆ ತನ್ನ ಗಂಡ ಬದುಕಿದ್ದಾಗಲೇ ರಕ್ಷಣಾ ಪಡೆ ಹಾಗೂ ರಾಜ್ಯಾಡಳಿತವನ್ನು ಸುಗಮವಾಗಿ ನಿರ್ವಹಿಸಿ ಎಲ್ಲರ ಪ್ರಶಂಸೆಗೂ ಪಾತ್ರಳಾಗಿದ್ದಳು. ಈಗಲು ಮೊದಲಿನಂತೆಯೇ - ಶಿವಾಜಿಯ ಕಾಲದಲ್ಲಿದ್ದಂತಹ ಸುಭಿಕ್ಷ ರಾಷ್ಟ್ರವನ್ನು ಕಟ್ಟಲು ನಿರ್ಧರಿಸಿ, ಮರಾಟಶಕ್ತಿಯನ್ನು ವರ್ಧಿವಸುತ್ತಾ ತನ್ನೆಲ್ಲ ಗಮನವನ್ನು ಕೇಂದ್ರೀಕರಿಸಿದ್ದಳು.”

ತಾರಾಬಾಯಿಯ ಆದೇಶದಲ್ಲಿ ಸೈನ್ಯ ಸಂಪೂರ್ಣ ಹೊಸರೂಪ ತಳೆದಿತ್ತು. ಎಲ್ಲಿಯೂ ದಂಗೆಕೋರರು, ಬಂಡುಕೋರರು ತಲೆಯೆತ್ತುವಂತಿರಲಿಲ್ಲ. ಮೊಘಲ್ ಚಕ್ರವರ್ತಿಯ ಸೋಲೇ ಏಕೈಕ ಗುರಿಯೆಂದು ಭಾವಿಸಿದ್ದ ಮರಾಟ ಪಡೆ ಮೊಘಲರನ್ನು ದಿಕ್ಕೆಡಿಸುವಂತೆ ಸುಸಜ್ಜಿತವಾಗಿದ್ದು, ಮೊಘಲರ ಪ್ರಾಂತ್ಯಗಳನ್ನೂ ಲೂಟಿಮಾಡಿದ್ದವು ಎನ್ನುತ್ತಾನೆ ಕಾಫಿಖಾರ್.

ಯುದ್ಧದಲ್ಲಿ ಬಹಳಷ್ಟು ಕೋಟೆ ಔರಂಗಜೇಬನಿಗೆ ವಶವಾದರೂ ಸಾಹಸಿ ಮರಾಠಾ ಸೈನಿಕರ ಸೋಲಿನಿಂದಾದುದಲ್ಲ ಔರಂಗಜೇಬನ ಒಳಸಂಚಿನಿಂದ ಹಣದಿಂದ ಖಿಲೇದಾರರನ್ನು ತೃಪ್ತಿಪಡಿಸಿ ಕೋಟೆಗಳನ್ನು ವಶಪಡಿಸಿಕೊಳ್ಳುತ್ತಿದ್ದ. ತಾರಾಬಾಯಿ ಇದರಲ್ಲಿಯೂ ಚಳ್ಳೆಹಣ್ಣು ತಿನ್ನಿಸಿದ್ದಳು. ಕೆಲವು ಬಾರಿ ಅವಳೇ ಖಿಲೇದಾರರಿಗೆ ಸೂಚನೆ ನೀಡಿ. ಸಾಕಷ್ಟು ಹಣ ಬಂದ ಮೇಲೆ ಔರಂಗಜೇಬನಿಗೆ ಕೋಟೆಯನ್ನು ಬಿಟ್ಟುಕೊಡುವಂತೆ ಹೇಳಿ, ಈ ನಾಟಕ ನಡೆದು ಔರಂಗಜೇಬ ಅಲ್ಲಿಂದ ಮುಂದಿನ ಕೋಟೆಗೆ ಧಾವಿಸಿದ ನಂತರ ಪುನಃ ಸೈನಿಕರನ್ನು ಆ ಕೋಟೆಗೆ ಕಳುಹಿಸಿ ಅಲ್ಲಿರುತ್ತಿದ್ದ ಬೆರಳೆಣಿಕೆಯ ಮೊಘಲ್ ಸೈನಿಕರನ್ನು ನಿರ್ನಾಮಮಾಡಿಸುತ್ತಿದ್ದಳು. ಹಣದ ಮಗ್ಗಟ್ಟಿದ್ದುದರಿಂದ ಈ ನಾಟಕ ನಡೆಯುತ್ತಿತ್ತು.

ಮಾನ್ ನದಿ ದಾಟಿ, ಖವಾಸ್ ಪುರಕ್ಕೆ ಹೊರಟ ಮೊಘಲ್ ಸೈನ್ಯ ನದಿ ದಂಡೆಯ ಮೇಲೆಯೇ ವಿಶ್ರಮಿಸುತ್ತಿತ್ತು. ಆ ಇರುಳು ಉಕ್ಕೇರಿದ ಪ್ರವಾಹದಲ್ಲಿ ಸೈನ್ಯ ಮುಳುಗಿ ಚಕ್ರವರ್ತಿಗೆ ಅಪಾರ ಹಾನಿಯನ್ನುಂಟು ಮಾಡಿತು. ಈ ಸದವಕಾಶ ಕಳೆದುಕೊಳ್ಳದ ತಾರಾಬಾಯಿ ಅಲ್ಲಲ್ಲಿ ಕೋಟೆಗಳಿಗೆ ಮುತ್ತಿಗೆ ಹಾಕಿದ್ದ ಮೊಘಲ್‌ರೊಡನೆ ಷಾಮೀಲಾಗಿ ತನಗೆ ದ್ರೋಹ ಬಗೆದ ಶಕ್ತಿಯುತ ಮೊರಾತ ಸೇನಾಧಿಕಾರಿಗಳನ್ನು ಯುದ್ಧದಲ್ಲಿ ತರಿದು ಹಾಕಲು ಅಜ್ಞಾಪಿಸಿದಳು.

ಸುಳ್ಳು ವದಂತಿಗಳನ್ನು ಹುಟ್ಟಿಸಿ, ಮೊಘಲ್ ಸೈನ್ಯದಲ್ಲಿ ಅಲ್ಲೋಲ ಕಲ್ಲೋಲ ಮಾಡುವ ತಂತ್ರ ಪ್ರಯೋಗಿಸಿದಳು. ಗೋಲ್ಕೊಂಡಾದ ಮಾಜಿ ರಾಜ “ಅಬುಲ್ ಹಸನ್ ಕುತುಬಾ ಷಾನನು ಮರಾಠರು ಬಿಡುಗಡೆ ಮಾಡಿದ್ದಾರೆ, ಅವನ ಅಧಿಕಾರ, ಅವನಿಗೇ ನೀಡುವರು” ಎಂಬ ವರ್ತಮಾನ ಕೇಳಿ ಮೊಘಲ್ ಸೇನಾಧಿಕಾರಿಗಳು ನಿಜವೆಂದೇ ನಂಬಿದ್ದರು. ಗೋಲ್ಕೊಂಡ ರಾಜನ ಮಗ ಕುತುಬ್ ಷಾಹಿಯೊಂತೂ ಮರಾಠರ ಬಿಡಾರಕ್ಕೆ ನಡೆದು ಔಂರಗಜೇಬನಿಂದ ಮರಣದಂಡನೆಗೆ ತುತ್ತಾಗಿದ್ದ.

ಒಂದೆಡೆ ಹಣದ ಮುಗ್ಗಟ್ಟು, ಸೈನ್ಯದ ಅಧಿಕಾರಿಗಳಲ್ಲಿ ಒಳಜಗಳ, ಅವರನ್ನು ಸುಮುಖರನ್ನಾಗಿಸಲು ಅವರಿಗೆ ಹೆಚ್ಚಿನ ಜಹಗೀರು ವತನ್‌ಗಳನ್ನು ಕೊಡುವ ಆಮಿಷಶಿಂದ, - ಚಳಸಂಚಿಗೆ ಹೆಸರಾದ ಔರಂಗಜೇಬನನ್ನು ಎದುರಿಸಿದ್ದಳು. – ತಾರಾಬಾಯಿ ಯುದ್ಧದಲ್ಲಿ ತನ್ನ ಶಕ್ತಿ, ಸಮಯ, ಆತ್ಮ, ಮನಸ್ಸ,

ಲ್ಲವನ್ನೂ ತೊಡಗಿಸಿ, ರಾಜಮನೆತನದವಳಾಗಿದ್ದರೂ ಸೂರ್ಯನ ತಾಪ ಲೆಕ್ಕಿಸದೆ, ಬಿಸಿಲು ಬೆಂಕಿಯ ಭೇದವಿಲ್ಲದೆ ಸೈನಿಕರ ಕಷ್ಟಸುಖ ವಿಚಾರಿಸಿ ಪ್ರೋತ್ಸಾಹ ಕೊಡುತ್ತಿದ್ದುದು ಎಲ್ಲರ ಮೆಚ್ಚುಗೆಗೂ ಕಾರಣವಾಗಿತ್ತು.

ತಾರಾಬಾಯಿಯ ಚತುರತೆ, ಆಕ್ರಮಣಶೀಲತೆಗಳು ಜೊತೆಗೆ ೩ ವರ್ಷಗಳ ಕಾಲ ತಮ್ಮವರನ್ನಗಲಿದ್ದ ಸೈನಿಕರ ಅಸಂತುಷ್ಟಿ, ಪ್ರಕೃತಿ ವಿಕೋಪಗಳಿಂದ ತನ್ನ ಆಸೆ ಈಡೇರದ ಬೇಗುದಿಯಿಂದಲೇ ರಾಜಧಾನಿಗೆ ಹಿಂತಿರುಗಿದ್ದ ಮೊಘಲ್ ಚಕ್ರವರ್ತಿ.

**ಶಾಹುವಿನೊಡನೆ:** ಔರಂಗಜೇಬನ ಮರಣದ ನಂತರ ಶಾಹು ತನ್ನ ಚಿಕ್ಕಮ್ಮನಿಗೆ ಪತ್ರ ಬರೆದು ತನಗೆ ಬಿಡುಗಡೆಯಾಗಿರುವುದರಿಂದ ತನ್ನ ಕರ್ತವ್ಯ ಪೂರೈಸಲು ತನಗೆ ಅವಕಾಶ, ಬೆಂಬಲ ನೀಡಬೇಕೆಂದು ಕೋರುತ್ತಾನೆ. ತಾರಾಬಾಯಿ ಅವನನ್ನು ದ್ರೋಹಿ, ಮೊಘಲರೊಡನೆ ಶಾಮೀಲಾದವನೆಂದು ಜರೆದು, ಅವನಿಗೆ ಅಧಿಕಾರ ಬಿಟ್ಟುಕೊಡಲು ನಿರಾಕರಿಸುತ್ತಾಳೆ. ಆದರೆ ಶಾಹುವಿಗೆ ಜನರ ಬೆಂಬಲ, ಕೆಲ ಮರಾಟ ಅಧಿಕಾರಿಗಳ ಬೆಂಬಲವಿತ್ತು. ಸೆರೆಯಲ್ಲಿದ್ದಾಗಲೂ ಅವನು ಕೆಲವರು ಪ್ರಮುಖರೊಂದಿಗೆ ಪತ್ರ ಸಂಪರ್ಕವಿಟ್ಟುಕೊಂಡಿದ್ದ. ತಾರಾಬಾಯಿ ಎಲ್ಲ ಮರಾಟ ನಾಯಕರುಗಳಿಗೂ ಪತ್ರ ಬರೆದು, "ಶಂಭೂಜಿ ಮೊಘಲರಿಂದ ಕಳೆದುಕೊಂಡ ರಾಜ್ಯವನ್ನು ರಾಜಾರಾಂ ಯುದ್ಧದಲ್ಲಿ ಗೆದ್ದುಕೊಂಡಿದ್ದನಾದ್ದರಿಂದ ಸಿಂಹಾಸನದ ಹಕ್ಕು ಶಿವಾಜಿಗೇ ಹೊರತು ಶಾಹುವಿಗಲ್ಲ. ಛತ್ರಪತಿ ಶಿವಾಜಿಗೂ ಶಂಭೂಜಿಯ ದುಷ್ಟಗುಣಗಳಿಂದ ನಿರಾಶೆಯಾಗಿತ್ತು, ರಾಜಾರಾಮನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಬೇಕೆಂಬಷ್ಟರಲ್ಲೇ ಬಲಪ್ರಯೋಗದಿಂದ ಅಧಿಕಾರ ಶಂಭೂಜಿ ಪಾಲಾಯ್ತು. ಇದರಿಂದ ರಾಜಾರಾಂಗೆ ಅನ್ಯಾಯವಾಗಿತ್ತು. ಶಾಹು ಮೊಘಲರ ಆತಿಥ್ಯ ಪಡೆದು ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮರಾಟರಿಗೆ ಗೌರವವಿಲ್ಲದಂತಾಗಿದೆ" ಎಂದು ವಾದಿಸಿದ್ದಳು. ಬಹಳ ಮಂದಿಗೆ ಸರಿಯೆನಿಸಿತ್ತು. ಇಷ್ಟೇ ಸಾಲದೆಂಬಂತೆ ತನ್ನ ಪರವಾಗಿ ಪ್ರಾಮಾಣಿಕತೆಯಿಂದ ದುಡಿಯುವುದಾಗಿ ಪ್ರತಿಜ್ಞೆ ತೊಡುವಂತೆ ಮಾಡಿದಳು. ಇದರಿಂದ ಕೆಲವರಿಗೆ ಅಸಮಾಧಾನವಾದರೆ, ಕೆಲವರು ಅರ್ಧಮನದಿಂದ, ಉಳಿದವರು ಪ್ರಾಮಾಣಿಕರಾಗಿ ಪ್ರತಿಜ್ಞೆ ಸ್ವೀಕರಿಸಿದರು.

ಶಾಹು ಶಾಂತಿಪ್ರಿಯ, ಉದಾರಮನದ, ಸ್ನೇಹಜೀವಿಯಾದ್ದರಿಂದ ಶಾಂತಿಯಿಂದಲೇ ನ್ಯಾಯ ಪಡೆಯಲು ನಿರ್ಧರಿಸಿದ್ದ. ಅವನಿಗೆ ಖಾಂಡೋ ಬಲ್ಲಾಳನಂತಹ ಸ್ವಾಮಿನಿಷ್ಠ ಸರದಾರರ ಬೆಂಬಲವಿತ್ತು.

ತಾರಾಬಾಯಿ, ಶಾಹುವಿನ ವಿರುದ್ಧ ಸೈನ್ಯ ಕಳುಹಿಸಿದಾಗ ಅವನು ಪೂನಾದ – ಖೇಡ್ ಎಂಬ ಹಳ್ಳಿಯಲ್ಲಿ ಆಶ್ರಯ ಪಡೆದ. ಸೈನ್ಯದ ಸೇನಾಪತಿ ಧನಾಜಿಯನ್ನು ಖಂಡೊ ಬಲ್ಲಾಳನ ನೆರವಿನಿಂದ ಒಲಿಸಿಕೊಂಡು ಕಪಟಯುದ್ಧ ಮಾಡಿಸುವಲ್ಲಿ ಯಶಸ್ವಿಯಾದ. ತಾರಾಬಾಯಿಯ ನಂಬುಗೆಯ ಬಂಟ ಪರಶುರಾಮ ತ್ರಿಂಬಕ್ ಒಬ್ಬನೇ ಪ್ರಾಮಾಣಿಕನಾಗಿ ಹೋರಾಡಿದ ಈ ಯುದ್ಧದಲ್ಲಿ ತಾರಾಯಿಯ ಸೇನೆಗೆ ಅಪಾರ ಹಾನಿ ಆಯಿತು. ತ್ರಿಂಬಕ್‌ನ ಸಾಹಸ ಅವನ ಅಧಿಕಾರ ಹೆಚ್ಚಿಸಿದ್ದರಿಂದ, ನೀಲಕಾಂತ್ ಶಾಹುವಿನ ಪರವಾಗಿ ಕೆಲಸ ಮಾಡಲು ರಹಸ್ಯವಾಗಿ ಧನಾಜಿ ಮತ್ತಿತರರನ್ನು ಪ್ರೇರೇಪಿಸುತ್ತಿದ್ದ. ಇದರಿಂದ ಕ್ರೋಧಗೊಂಡ ತಾರಾಬಾಯಿ ಅವನನ್ನು ಜೈಲಿಗೆ ತಳ್ಳಿದಳು. ಖೇಡ್ ಗೆದ್ದ ಶಾಹು ಸೈನ್ಯ ಸತಾರಕ್ಕೆ ಧಾವಿಸುವ ಹಾದಿಯಲ್ಲಿ ವಿಚಿತ್ರಘರ್‌ನ ರಕ್ಷಣಾಧಿಕಾರಿಗೆ ಶಾಹು ತನ್ನ ಬೆಂಬಲಕ್ಕಿರಬೇಕು ಇಲ್ಲವೆ ಯುದ್ಧಮಾಡಬೇಕೆಂದು ಹೇಳಿಕಳುಹಿಸುತ್ತಾನೆ. ಶಂಕ್ರಾಜಿ ನಾರಾಯಣ ಸಚಿವ್‌ಗೆ ಶಾಹುವಿನೊಡನೆ ಸಮರಕ್ಕಿಳಿಯುವುದು ಆತ್ಮದ್ರೋಹ, ಹಾಗೆಂದು ತಟಸ್ಥನಾದರೆ ತಾರಾಬಾಯಿಗೆ ಕೊಟ್ಟ ವಚನದ ಭಂಗ – ಈ ದ್ವಂದ್ವ, ಮಾನಸಿಕ ಹಿಂಸೆಗಳನ್ನು ಸಹಿಸಲಾಗದೆ, ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇದರಿಂದ ನೊಂದ ಶಾಹು ಮೃತನ ಕುಟುಂಬವನ್ನು ಆದರದಿಂದ ನೋಡಿಕೊಳ್ಳುವುದೇ ಅಲ್ಲದೆ ಸಚಿವನ ಮಗನಿಗೇ ಅಧಿಕಾರ ನೀಡುವನು. ಸತಾರದಲ್ಲಿ ಕೋಟೆಯ ದ್ವಾರಪಾಲಕನ ಕುಟುಂಬವನ್ನು ಸೆರೆಹಿಡಿದು ಕೋಟೆ ಬಾಗಿಲು ತೆರೆಯದಿದ್ದರೆ ಕುಟುಂಬವನ್ನು ನಾಶಪಡಿಸುವುದಾಗಿ ದ್ವಾರಪಾಲಕ ಷೇಕ್ ಮಿರಾನನ್ನು ಬೆದರಿಸುತ್ತಾರೆ. ರಕ್ಷಣಾಧಿಕಾರಿ ತ್ರಿಂಬಕ್‌ಗೆ ವಿಷಯ ತಿಳಿದರೂ ನಿರ್ಲಿಪ್ತನಾಗಿರುವುದ ಕಂಡು, ರೋಷಗೊಂಡ ದ್ವಾರಪಾಲಕ ತ್ರಿಂಬಕ್‌ನನ್ನೇ ಬಂಧಿಸಿ ಶಾಹುವಿನ ಸೈನವನ್ನು ಬರಮಾಡಿಕೊಳ್ಳುವನು. ಸಚಿವನ ಮರಣ, ತ್ರಿಂಬಕ್ ಬಂಧನ ತಾರಾಬಾಯಿಗೆ ಬಹುದೊಡ್ಡ ಪೆಟ್ಟು.

ಬಸಂತ್‌ಘರ್‌ನ ಸೆರೆಮನೆಯಲ್ಲಿದ್ದ ನೀಲ್‌ಕಾಂತನನ್ನು ಬಿಡುಗಡೆ ಮಾಡಿ ಕರೆಸಿ ಆತನ ತೊಡೆಯ ಮೇಲೆ ಶಿವಾಜಿ 111 ಮತ್ತು ಶಂಭೂಜಿ (ರಜಸ್‌ಬಾಯಿಯ ಮಗ) ಯನ್ನು ಕೂರಿಸಿ, ಮೊಘಲರೊಂದಿಗೆ ಶಾಮೀಲಾಗಿ ದೇಶದ ಅವನತಿಗೆ ಕಾರಣನಾಗಿರುವ ಶಾಹುವಿನಿಂದ ಈ ಇಬ್ಬರನ್ನೂ ಉಳಿಸೆಂದು ಬೇಡಿಕೊಳ್ಳುತ್ತಾಳೆ. ತಾರಾಬಾಯಿಯ ಚಾಂಚಲ್ಯದ ಅನುಭವವಿದ್ದ ನೀಲ್‌ಕಾಂತನಿಗೆ ಈ ನಾಟಕವೆಲ್ಲ ಅರ್ಥವಾಗಿದ್ದರೂ, ತನ್ನ ಸ್ವಾಮಿ ರಾಜಾರಾಂನ ಕುಟುಂಬವನ್ನು ನಾಶಪಡಿಸುವ ಉದ್ದೇಶವಿರಲಿಲ್ಲ, ತನ್ನ ಸಹಾಯದ ಅಗತ್ಯವಿರುವಾಗ ವಿಮುಖನಾಗುವ

10ನೇ ಪುಟ ನೋಡಿ.

# ಆರೋಗ್ಯ

## ನಿರ್ಲಕ್ಷ್ಯಕ್ಕೆ ಒಳಗಾಗುವ ಹೆಣ್ಣುಮಕ್ಕಳು.

ಹೆಣ್ಣು ಮಗು ಹುಟ್ಟಿದ ಕ್ಷಣದಿಂದ ತಾತ್ಸಾರ ದಿಂದ ಕಾಣುವುದು ನಮ್ಮ ಸಮಾಜಕ್ಕೆ ಹೊಸದಲ್ಲ. ಹೆಣ್ಣು ಮಗುವನ್ನು ಕಡೆಗಾಣಿಸಿರುವುದಕ್ಕೆ ನೂರಾರು ವರುಷಗಳ ಚರಿತ್ರೆ ಇದೆ.

ಈ ಹಿನ್ನೆಲೆಯಲ್ಲಿ ಭಾರತದ ಮಹಿಳಾ ಆರೋಗ್ಯದ ಪರಿಸ್ಥಿತಿಯ ಕುರಿತಾಗಿ ವಿಶ್ಲೇಷಿಸಿದಾಗ ಕೆಲವು ಗಮನೀಯ ಅಂಶಗಳು ಗೋಚರಿಸುವುವು. ಹುಟ್ಟಿನಿಂದಲೇ ಹೆಣ್ಣನ್ನು ಅಸಡ್ಡೆಯಿಂದ ಕಾಣುವ ನಿಲುವು ಒಟ್ಟಾರೆ ಆಕೆಯಬೆಳವಣಿಗೆಯ ಮೇಲೆ ಮತ್ತು ಮುಖ್ಯವಾಗಿ ಆಕೆಯ ಆರೋಗ್ಯದ ಮೇಲೆ ಗಂಭೀರ ಪರಿಣಾಮ ಬೀರಿದೆ. ಮಹಿಳಾ ಆರೋಗ್ಯಕ್ಕೆ ಸಂಬಂಧಪಟ್ಟಂತಹ ಸರಿಯಾದ ದೃಷ್ಟಿಕೋನದ ಅಧ್ಯಯನಗಳು ಹಾಗೂ ಅಂಕಿ ಅಂಶಗಳ ಕೊರತೆ ಇರುವುದರಿಂದ ಹೆಣ್ಣಿನ ಆರೋಗ್ಯದ ಸುಧಾರಣೆ ಹೊಂದದೆ ತೀರಾ ಕೆಳಮಟ್ಟಕ್ಕೆ ಇಳಿಯುತ್ತಿರುವುದು ವಾಸ್ತವಿಕ ಸಂಗತಿ.

ಭಾರತದ ಸೆಕ್ಸ್ ರೇಷಿಯೋ ತೆಗೆದು ಕೊಂಡಾಗ ೧೯೦೧ರಲ್ಲಿ ಪ್ರತಿ ೧೦೦೦ ಪುರುಷರಿಗೆ ೯೧೨ ಮಹಿಳೆಯರಿದ್ದರು. ಈ ಮಹಿಳಾ ಸಂಖ್ಯೆ ೧೯೫೧ ರಲ್ಲಿ ೯೪೬ಕ್ಕೆ ಹಾಗೂ ೧೯೮೧ ರಲ್ಲಿ ೯೩೩ಕ್ಕೆ ಇಳಿಮುಖವಾಗಿರುವುದು ಕಂಡುಬಂದಿದೆ. ಈ ರೀತಿಯಲ್ಲಿ ಕಡಿಮೆಯಾಗುತ್ತಿರುವ ಮಹಿಳಾ ಸಂಖ್ಯೆ, ಹೆಣ್ಣು ಮಕ್ಕಳ ಸಾವಿನ ಸಂಖ್ಯೆ ಹೆಚ್ಚುತ್ತಿರುವುದು, ಮಹಿಳೆಯರ ಅಲ್ಪ ಜೀವನಾವಧಿ, ತಾಯ್ತನಕ್ಕೆ ಸಂಬಂಧಪಟ್ಟ ಸಾವು ಹೆಚ್ಚುತ್ತಿರುವುದು, ಮಹಿಳೆಯರಲ್ಲಿ ಅಸ್ವಸ್ಥತೆ ಹೆಚ್ಚುತ್ತಿರುವುದು, ಇವು ಗಂಭೀರ ಹಾಗೂ ಗಮನಿಸಬೇಕಾದ ವಿಚಾರಗಳಾಗಿವೆ.

ಗಂಡು ಮಗುವನ್ನು ಹೆಣ್ಣು ಮಗುವಿಗಿಂತ ಮೇಲಾಗಿ ನೋಡುವುದು, ಹೆಣ್ಣು ಮಗುವನ್ನು ಅಸಡ್ಡೆಯಿಂದ ಕಾಣುವುದು ನಮ್ಮ ದೇಶದ ಹಲವಾರು ಕಡೆ ನಡೆದ ಅಧ್ಯಯನದ ಮೂಲಗಳಿಂದ ತಿಳಿದು ಬಂದಿದೆ. ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳಿಗೆ ಹಾಲುಣಿಸುವ ಅವಧಿ ಹೆಚ್ಚಿರುವುದು ವಾಸ್ತವಿಕ ಅಂಶ.

ಪೌಷ್ಟಿಕ ಆಹಾರ ಒದಗಿಸಲಾಗದ ಕೆಳಮಟ್ಟದ ಸಾಮಾಜಿಕ, ಆರ್ಥಿಕ ವರ್ಗದ ಗುಂಪುಗಳಲ್ಲಿ ಕೂಡ ಶೇ. ೯೦ ತಾಯಂದಿರು ತಮ್ಮ ಗಂಡು ಮಕ್ಕಳಿಗೆ ಪೌಷ್ಠಿಕ ಆಹಾರ ನೀಡುವಲ್ಲಿ ಯಶಸ್ವಿಯಾಗಿದ್ದಾರೆಂಬ ವರದಿ ಇದೆ. ಹಾಗೆಯೇ ಶೇ. ೭೨ ತಾಯಂದಿಗು ಮಾತ್ರ ತಮ್ಮ ಹೆಣ್ಣು ಮಕ್ಕಳಿಗೆ ಪೌಷ್ಠಿಕ ಆಹಾರ ಒದಗಿಸಲು ಸಮರ್ಥರಾಗಿರುತ್ತಾರೆ. ಈ ಪರಿಸ್ಥಿತಿ ಮೇಲು ಮಟ್ಟದ ಸಾಮಾಜಿಕ, ಆರ್ಥಿಕ ವರ್ಗಧ ಗುಂಪುಗಳಲ್ಲೂ ಕಂಡು ಬಂದಿದೆ.

ಅನಾರೋಗ್ಯ ಹಾಗೂ ಅಪೌಷ್ಠಿಕತೆಯಿಂದ ನರಳುತ್ತಿದ್ದರೂ ಹೆಣ್ಣು ಮಕ್ಕಳಿಗೆ ಸರಿಯಾದ ಚಿಕಿತ್ಸೆ ನೀಡುವುದಿಲ್ಲ. ಆಸ್ಪತ್ರೆಗೆ ದಾಖಲಾಗುವ ಪ್ರತಿ ೩ ಗಂಡು ಮಕ್ಕಳಿಗೆ ಒಂದು ಹೆಣ್ಣು ಮಗು ದಾಖಲಾಗುವುದು, ಪ್ರಾಥಮಿಕ ಆರೋಗ್ಯ ಕೇಂದ್ರದ ಸೇವೆಯನ್ನು ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳು ಪಡೆಯುತ್ತಿರುವುದು ಎಂಬ ಅಂಶ ಮುಂಬಯಿನ ಅಧ್ಯಯನವೊಂದರಿಂದ ತಿಳಿದು ಬಂದಿದೆ. ಹೆಣ್ಣು ಮಕ್ಕಳು ಆರೋಗ್ಯ ಕೇಂದ್ರದ ಸೇವೆಯ ಅನುಕೂಲ ಪಡೆಯುತ್ತಿಲ್ಲ ಅಂದ ಮಾತ್ರಕ್ಕೆ ಆಕೆ ಆರೋಗ್ಯವಾಗಿದ್ದಾಳೆ ಎನ್ನುವ ಮಾತು ಸರಿಯಲ್ಲ. ಆಕೆಯ ಆರೋಗ್ಯದತ್ತ ಗಮನ ಹರಿಸದೇ ನಿಕೃಷ್ಟವಾಗಿ ಕಂಡು, ಯಥಾಪ್ರಕಾರ ಹೆಣ್ಣು ಮೌನವಾಗಿ ನರಳುವುದನ್ನು ಬಲಪಡಿಸುವ ನಿಲುವುಗಳು ಕಂಡು ಬಂದಿವೆ.

ಈ ಪರಿಸ್ಥಿತಿಯಲ್ಲಿ ನಮ್ಮ ದೇಶದ ಮಹಿಳಾ ಚಳುವಳಿಯ ಮುಖ್ಯ ಉದ್ದೇಶಗಳಲ್ಲಿ ಮಹಿಳಾ ಆರೋಗ್ಯ ಸುಧಾರಣೆ ಮೊಟ್ಟಮೊದಲ ಆಯ್ಕೆಯಾಗಬೇಕು.

ಸವಿತಾ ಎ.

# ಸಂದರ್ಶನ?

ನಾನು ಸಂದರ್ಶನಕ್ಕೆ ಹೊರಟೆ,
ಎಲ್ಲೆಲ್ಲಿ ಹೋಪರೂ
ಹೊಲಿದ ಬಾಯ್ಗಳು
ಬಿಗಿದ ಕೈಗಳು
ವಿವಸ್ತ್ರವಾದ ಮೈಗಳು
ಎದುರಾಗುತ್ತಿದ್ದವು.

ನಿಮಗೆ ಮುಕ್ತಿ ಬೇಡವೆ?
ಎಂದು ಕೇಳಿದೆ.

ಸದ್ಯದ ಮೂರ್ಖ ಸ್ಥಿತಿಯಲ್ಲಿ
ಮೌನಕ್ಕಿಂತ ಹೆಚ್ಚಿನ ಮುಕ್ತಿ
ಸಾಧ್ಯವಿಲ್ಲ ಎಂದವು. ಅವುಗಳ
ಬಿಸಿ ನಿಟ್ಟುಸಿರಲ್ಲಿ ಬೆಂದು ಹೋದೇನು
ಎಂದು ಹೆದರಿ ಮುಂದೆ ಹೋದೆ.

ಮುಚ್ಚಿದ ಕಿಟಕಿಗಳಿದ್ದವು
ದೇವರ ಶಾಪಕ್ಕೆ ಹೆದರಿ ಕೆಂಗಾಲಾದ
ಸಾತ್ವಿಕ ಮನಸ್ಸುಗಳಿದ್ದವು.
ಬಾವಿಗಿಂತ ಹೆಚ್ಚು ತಿಳಿಯ ಬಯಸದ
ಅಸ್ಪಷ್ಟ ಕಪ್ಪೆಗಳೂ ಇದ್ದವು.
ಪ್ರಪಂಚವನ್ನ ಮೈಗೆ ಒಗ್ಗಿಸಿಕೊಂಡ
ಅವಕ್ಕೆ, ಪ್ರಶ್ನೆಗಳೇಕೆ?
ನಿಮ್ಮ ಮೌಢ್ಯ ಕಡಿಮೆ ಮಾಡಲು
ದೇವರಿಗೊಂದು ಅಪ್ಲಿಕೇಶನ್ ಹಾಕುತ್ತೇನೆ
ಎಂದುಕೊಂಡು ಕಾಲಿಗೆ ಬುದ್ಧಿ ಹೇಳಿದೆ.

ನಿರ್ಜನವಾದ ಕಾಡು.
ಅಲ್ಲಿ ಹಲವಾರು ಬೋಳು
ಮರಗಳು ಗೋಳಿಡುತ್ತಿದ್ದವು.
ಕೊಂಬೆ-ರೆಂಬೆ ಕಡಿದುಕೊಂಡು
ಹಸಿರು-ಹೂವಿಲ್ಲದ ಅವುಗಳ
ಸ್ಥಿತಿಗೆ ಕಣ್ತುಂಬಿತು.
ನಿಮಗೆ ಚಿಗುರುವ ಬಯಕೆಯಿಲ್ಲವೆ?
ಎಂದೆ, ನಮ್ಮನ್ನು ಚಿಗುರಿಸುತ್ತೀಯಾ?
ಕಾಯಿ ಹೂ ಹಣ್ಣು ಚಿಗಿಯುವಂತೆ
ಮಾಡುತ್ತೀಯಾ? ಇದಕ್ಕಾಗಿ ಬುಡಕ್ಕೆ
ರಕ್ತ ಬಸಿಯುತ್ತೀಯಾ? ಎಂದು
ಸವಾಲು ಹಾಕಿದವು. ಕಂಪಿಸುವ
ಹೃದಯ ಅಂಗೈಲಿಟ್ಟುಕೊಂಡು
ಪ್ರಯತ್ನಿಸುವೆ ಎಂದು ಮುಂದೆ
ನಡೆದೆ.



ನನ್ನ ಚೀಲ ಭಾರವಾಗಿತ್ತು.
ಅದರಲ್ಲಿ ಬಿಸಿ ನಿಟ್ಟುಸಿರುಗಳಿದ್ದವು.
ಜ್ವರದ ತಾಪಗಳು, ಬಳಲಿಕೆಗಳಿದ್ದವು.
ಅತೃಪ್ತಿಗಳಿದ್ದವು. ತುಕ್ಕು ಹಿಡಿಯುತ್ತಿದ್ದ
ಅಮೂಲ್ಯ ರತ್ನಾಭರಣಗಳೂ ಇದ್ದವು.

ಭಾರವಾದ ಕಾಲೆಳೆಯುತ್ತಾ
ನಡೆದಿದ್ದೆ. ಎದುರು ಬಿಸಿಲು
ಯಾರೋ ನಿಂತಂತಾಯಿತು.
ಆಯಾಸದ ಕಣ್ಣಿಗೆ ಸ್ಪಷ್ಟವಾಗಲಿಲ್ಲ
ಗುರುತು ಸಿಕ್ಕಲಿಲ್ಲವಾ?
ನಾವು ಅಮ್ಮಂದಿರ ಕೆಂಡದಂತ
ಕೋಪವನ್ನು ಬೆಣ್ಣೆಯಂತೆ
ಕರಗಿಸುವ, ಕನಸುಗಳು
ನಮಗೆ ಈ ಸೂರ್ಯ ಚಂದ್ರ
ನಿಮ್ಮ ಕಥೆ, ಕಾವ್ಯ ಎಲ್ಲ ಬೇಕು.
ಬಿಸಿಲು ನೆರಳಿನ ಆಟ
ಬೇಕು. ನಮ್ಮ ಕನಸನ್ನೇ
ಹೊಸಗಿ ಹಾಕುವವರ ಬಗ್ಗೆ
ಬರಿ, ನಮ್ಮ ಬಗ್ಗೆ ಬರಿ ಎಂದು
ನನಗೆ ಮುಗಿಬಿದ್ದವು.
ನನ್ನ ಚೀಲ ಭಾರವಾಗಿತ್ತು.

ಮಧುಮತಿ ಬಿ. ಎಸ್.

ಮನವಿರಲಿಲ್ಲ ಜೊತೆಗೆ ಸತಾರಾದ ರಾಜ ಶಾಹು ಪ್ರಥ್ಮಾ ಪಟ್ಟ ನೀಡದ ನಿರಾಶೆ ತಾರಾಬಾಯಿಗೆ ಸಹಾಯಕವಾಗುತ್ತದೆ.

ವಯೋವೃದ್ಧ, ಅನುಭವಿ, ರಾಜ ನೀತಿಜ್ಞ ರಾಮಚಂದ್ರ ನೀಲ್ಕಾಂತನ ಸಲಹೆಯ ಮೇರೆಗೆ ಪನ್ಹಾಲದಿಂದ ರಂಗ್ನಾಕ್ಕೆ ಹೋಗುತ್ತಾಳೆ. ಈ ಮಧ್ಯೆ ಸರದಾರರಿಗೆ ಹೆಚ್ಚಿನ ವತನ್, ಜಹಗೀರುಗಳ ಆಸೆ ತೋರಿಸಿ ತನ್ನೆಡೆ ಸೆಳೆದುಕೊಳ್ಳುವ ಯತ್ನಿಸುತ್ತಿದ್ದ ತಾರಾಬಾಯಿ ಶಾಹು ರಂಗ್ನಾಕ್ಕೆ ಬರುತ್ತಿರುವುದನ್ನು ತಿಳಿದು ಪಶ್ಚಿಮ ಕರಾವಳಿಯ ಮಾಲ್ವನ್‌ಗೆ ಧಾವಿಸುತ್ತಾಳೆ. ಶಾಹುವಿನ ಸೈನ್ಯದ ನೇತೃತ್ವ ವಹಿಸಿದ್ದ ಧನಾಜಿ, ಪರಶುರಾಮ ತ್ರಿಂಬಕ್, ಖಂಡೋ ಬಲ್ಲಾಳ್, ಚಿತ್ನೀಸ್‌ಗೆ ನೀಲಕಾಂತ ಮತ್ತು ತಾರಾಬಾಯಿ ಪತ್ರ ಬರೆಯುತ್ತಾರೆ. ನೀಲಕಾಂತ, ತಾರಾಬಾಯಿಯ ವಾದ ಸರಿಯೆಂದೂ ತಾನು ಸಿಟ್ಟಿನಲ್ಲಿದ್ದಾಗ ಆಕೆಯ ವಾದ ತಪ್ಪೆಂದು ಹೇಳಿದ್ದಾಗಿಯೂ, ಶಾಹುವಿಗೆ ಸಿಂಹಾಸನಾಧಿಕಾರವಿಲ್ಲವೆಂದು ಬರೆದರೂ ಸಫಲವಾಗುವುದಿಲ್ಲ. ಶಾಹುವಿನ ಸೈನ್ಯದಲ್ಲಿದ್ದ ನರೋಪಂತ್, ರಾಯ್‌ಜಿ ಪ್ರಲ್ಹಾದ್, ಶಾಹುವಿನಿಂದ ತನ್ನ ವರ್ತ ಕಳೆದುಕೊಂಡಿದ್ದ ಖಾಂಡೆರಾವ್ ದಾಬಡೆ ತಾರಾಬಾಯಿಯ ಪರ ಒಳಸಂಚು ನಡೆಸಿದ್ದರು. ನರೋಪಂತ್‌ನನ್ನು ಪೇಶ್ವೆಯನಾಗಿಸುವ ಆಮಿಷವೊಡ್ಡಿ ಶಾಹುವನ್ನು ಅಧಿಕಾರದಿಂದ ಕೆಳಗಿಳಿಸಲು ವಿಫಲ ಯತ್ನ ನಡೆಸಿದ್ದಳು. ಪನ್ಹಾಲಾದ ನಂತರ ನೀಲಕಾಂತ್‌ನ ರಕ್ಷಣೆಯಲ್ಲಿದ್ದ ರಂಗ್ನಾ ದಕ್ಕದೆ ಸತಾರಕ್ಕೆ ಹಿಂತಿರುಗಿದ ನಂತರ ಶಾಹು ಗೆದ್ದಿದ್ದ ಕೃಷ್ಣ ಮತ್ತು ವರ್ನ ನದಿಗಳ ಮಧ್ಯದ ಪ್ರಾಂತ್ಯ ತಾರಾಬಾಯಿಯದಾಗುತ್ತವೆ.

ಧನಾಜಿಯ ೨ನೇ ಮಗ ಹಾಗೂ ಶಾಹುವಿನ ಸೇನಾನಿ ಚಂದ್ರಸೇನ ತನ್ನ ರಾಜನಿಗೆ ದ್ರೋಹ ಮಾಡಿ ತಾರಾಬಾಯಿಯ ಆಶ್ರಯಕ್ಕೆ ಬರುತ್ತಾನೆ. ಎಂದಿನಂತೆ ತಾರಾಬಾಯಿ ಇವನಿಗೇ ಹೆಚ್ಚು ಮಾನ್ಯತೆ ನೀಡುತ್ತಾಳೆ. ಮೊಘಲರ ಅಸೂಯೆಗೆ ಕಾರಣನಾಗಿದ್ದ ಶಾಹುವನ್ನು ಸೋಲಿಸಲು ಮೊಘಲರೊಡನೆ ರಾಜಿ ಆಗುವುದರಲ್ಲಿರುತ್ತಾಳೆ. ದೇಶಭಕ್ತ ನೀಲಕಾಂತ್ ಬೇರೆ ದಾರಿ ಕಾಣದೆ ತಾರಾಬಾಯಿ ಹಾಗೂ ಅವಳ ಮಗ ಶಿವಾಜಿಯನ್ನ ಸೆರೆಗೆ ತಳ್ಳಿ ರಜಸ್‌ಬಾಯಿಯ ಮಗ ಶಂಭೂಜಿಯನ್ನು ಸಿಂಹಾಸನದ ಮೇಲೆ ಕೂರಿಸುತ್ತಾನೆ. ಶಿವಾಜಿ ಸೆರೆಯಲ್ಲಿದ್ದಾಗಲೇ ಸಾವನ್ನಪ್ಪುತ್ತಾನೆ.

ತಾರಾಬಾಯಿಯ ಸೋಲಿಗೆ ಕಾರಣ–ಧೃಢ ಬೆಂಬಲ ನೀಡದ ಸರದಾರರು, ಆಕೆಯ ಸರ್ವಾಧಿಕಾರದ ದರ್ಪ, ಮಹತ್ವಾಕಾಂಕ್ಷೆ, ಕೃತಘ್ನತೆ ಮತ್ತು ಅತಿ ಸಂಶಯದ ಪ್ರವೃತ್ತಿ. ಶಂಭೂಜಿ ಮೊಘಲರ ನೆರವಿನೊಂದಿಗೆ ಪನ್ಹಾಲಾದಲ್ಲಿ ನಡೆಸಿದ ಯುದ್ಧದಲ್ಲಿ ಶಾಹುವಿಗೆ ವಿಜಯಲಕ್ಷ್ಮಿಯು ಒಲಿಯುತ್ತಾಳೆ. ಶಂಭೂಜಿ ತಪ್ಪಿಸಿಕೊಂಡರೂ ರಾಜ ಕುಟುಂಬ ಸೆರೆಯಾಗುತ್ತದೆ. ತಾರಾಬಾಯಿಯನ್ನು ತನ್ನ ಬಳಿಯಲ್ಲೇ ಇರಿಸಿಕೊಂಡು ಉಳಿದವರನ್ನು ಪರ್ಹಾಲಕ್ಕೆ ಕಳುಹಿಸುತ್ತಾನೆ. ೪೨ ವರ್ಷಗಳ ನಂತರದ ಪ್ರಥಮ ಭೇಟಿಯದು. ಕಡೇ ಬಾರಿ ಕಂಡಿದ್ದಾಗ ಶಾಹುವಿಗೆ ೭ ವರ್ಷ, ತಾರಾಬಾಯಿ ಎಳೆಯ ತರುಣಿ. ಈಗ ಇಬ್ಬರೂ ಮಧ್ಯವಯಸ್ಸನ್ನು ದಾಟಿ, ಶತ್ರುಗಳಾಗಿ ಅಧಿಕಾರಕ್ಕೆ ಕಾದಾಡಿದ್ದರೇ ವಿನಃ ಭೆಟ್ಟಿಯಾಗಿಲಿಲ್ಲ, ಶಂಭೂಜಿ ಮನೆತನದ ಹಿರಿಯಳಿಗೆ ಕೊಡಬೇಕಾದ ಗೌರವ ನೀಡುತ್ತಿದ್ದು, ಸೆರೆಯಲ್ಲಿದ್ದಾಗಲೂ ಸಹ ಪತ್ರ ಸಂಪರ್ಕವಿರಿಸಿಕೊಂಡಿದ್ದ. ಸ್ವಾತಂತ್ರ್ಯ ಸಿಕ್ಕ ಬಳಿಕ ಪುನಃ ರಾಜಕೀಯದಲ್ಲಿ ಅಸಕ್ತಿ ತಳೆದು ಶಿವಾಜಿಯ ಮನೆತನ ಅಧಿಕಾರಕ್ಕಾಗಿ ಕಾದಾಡುವುದನ್ನು ತಪ್ಪಿಸಲು ಶಕ್ತಿಮೀರಿ ಯತ್ನಿಸಿ, ಶಾಹು ಮತ್ತು ಶಂಭೂಜಿಯರ ಮಧ್ಯೆ ಶಾಂತಿ ಒಪ್ಪಂದ ಏರ್ಪಡಿಸುವಲ್ಲಿ ವಿಜಯಿಯಾಗುತ್ತಾಳೆ. ಶಾಹುವಿಗೆ ಪುತ್ರರಿರಲಿಲ್ಲ, ಶಂಭೂಜಿ ತನ್ನ ಸ್ಥಾನಕ್ಕೆ ಅನರ್ಹನೆನಿಸಿದಾಗ ದತ್ತು ತೆಗೆದುಕೊಳ್ಳಲು ನಿಶ್ಚಯಿಸುತ್ತಾನೆ. ಆಗ ತಾರಾಬಾಯಿ ತನ್ನ ಮಗನ ಮಗ ರಾಮರಾಜನ್ನು ಶಂಭೂಜಿಯ ಕಣ್ತಪ್ಪಿಸಿ ರಹಸ್ಯವಾಗಿ ಬೆಳೆಸಿರುವುದಾಗಿ ತಿಳಿಸಿ ಅವನಿಗೇ ಪಟ್ಟಕಟ್ಟಲು ಕೋರುತ್ತಾಳೆ, ಶಾಹು ಹಾಗೇ ಮಾಡುವನು. ಶಾಹುವಿನ ಮರಣಾ ನಂತರ ಪೇಶ್ವೆಗಳ ಬಲ ಕುಗ್ಗಿಸಲು ರಾಮರಾಜ ಮತ್ತಿತರರನ್ನು ಎತ್ತಿ ಕಟ್ಟುವ ಯತ್ನದಲ್ಲಿ ಸೋತು, ರಾಮರಾಜನನ್ನೆ ಕಪಟದಿಂದ ಸೆರೆಹಿಡಿದರೂ ನಿಷ್ಫಲವಾಗುತ್ತದೆ. ರಾಮರಾಜ ಸ್ವಂತ ಮೊಮ್ಮಗನಲ್ಲವೆಂದು ಪೇಶ್ವೆಗೆ ಕಡೆಯಲ್ಲಿ ತಿಳಿಸುತ್ತಾಳೆ.

ತಾರಾಬಾಯಿ ಅತ್ಯುತ್ತಮ ಎನ್ನುವಂತಹ ವ್ಯಕ್ತಿತ್ವ ಹೊಂದಿರಲಿಲ್ಲವಾದರೂ, ಹೀನಪ್ರವೃತಿಯವಳಲ್ಲ. ತನ್ನ ಪತಿ ಮತ್ತಿತರ ರಾಜಕೀಯ ಧುರೀಣರಿಂದಲೂ ಮೆಚ್ಚುಗೆ, ಗೌರವ ಪಡೆದಂಥ ಜಾಣ್ಮೆ, ಚತುರತೆಯುಳ್ಳವಳಾಗಿದ್ದಳು. ಜೋನ್ ಆಫ್ ಆರ್ಕ್‌ನಂತೆ ಹುತಾತ್ಮಳಲ್ಲ, ರಷ್ಯಾದ ಕ್ಯಾಥರೀನ್, ಇಂಗ್ಲೆಂಡ್‌ನ ರಾಣಿ ಎಲಜಬೆರ್‌ರಂತೆ ನಿಪುಣ ರಾಜನೀತಿಜ್ಞೆ, ಆಡಳಿತಜ್ಞೆಯೆನಿಸಲಿಲ್ಲ. ರಾಣಿ ದುರ್ಗಾವತಿ ಅಥವ ಚಾಂದ್ ಸುಲ್ತಾನರಂತೆ ನಿಷ್ಕಪಟ ಉದ್ದೇಶ ಹೊಂದಿದವಳಾಗಿರಲಿಲ್ಲವಾದರೂ ಅಸಾಮಾನ್ಯ ವ್ಯಕ್ತಿತ್ವ ಪಡೆದಿದ್ದಳು. ಅವಳ ಸಾಮರ್ಥ್ಯ ಬೆಳಕಿಗೆ ಬರುತ್ತಿದ್ದುದೇ ಅಶಾಂತಿ, ಅರಾಜಕತೆಗಳ ಕಾಲದಲ್ಲಿ.

ರಾಜಕೀಯವೇ ಉಸಿರಾಗಿದ್ದ, ಆಧಿಕಾರಕ್ಕ ತಹತಹಿಸುತ್ತಿದ್ದು, ತನ್ನ ಗುರಿಸಾಧನೆ ಮಾರ್ಗವನ್ನು ಪರಾಮರ್ಶಿಸಿರದ ಈ ಚೈತನ್ಯ ಮುಪ್ಪಿನಲ್ಲಿ ನಿರ್ಭಾಗ್ಯಳಾಗಿ, ಶಾಪಗ್ರಸ್ಥಳಂತೆ ಕೊನೆಯುಸಿರೆಳೆದ ದುರ್ಭಾಗ್ಯೆ.

ಗೀತಾ ಜಿ. ಎಸ್.

ಆಧಾರ – "ತಾರಾಬಾಯಿ ಅಂಡ್ ಹರ್ ಟೈಮ್ಸ್"

## ಚಂದಾದಾರರಿಗೆ

ಪ್ರಿಯರೇ,

ಒಂದು ವರ್ಷದಿಂದ 'ಮಾನಸ ತಿಂಗಳ ಪತ್ರಿಕೆ' ಯನ್ನು ನಿಯತಕಾಲಿಕವಾಗಿ ತರುತ್ತಿರುವ ನಮ್ಮ ಪ್ರಯತ್ನಗಳಿಗೆ ನಿಮ್ಮ ಪ್ರೋತ್ಸಾಹ ಹಾಗೂ ಸಹಕಾರಗಳೇ ಆಧಾರವಾಗಿದೆ. ಈ ಡಿಸೆಂಬರ್‌ನಲ್ಲಿ ಬರುವ ಸಂಚಿಕೆಯು ಸೇರಿ ನಿಮಗೆ ಒಟ್ಟು ಹತ್ತು ಸಂಚಿಕೆಗಳು ತಲುಪಿರಬೇಕು. ನಾವು ಜನವರಿಯಿಂದ ಜನವರಿಗೆ ಚಂದಾ ಸಂಗ್ರಹಿಸುತ್ತೇವೆ. ಮಧ್ಯದಲ್ಲಿ ಚಂದಾ ಕಳುಹಿಸಿದ ಚಂದಾದಾರರಿಗೂ ವರ್ಷದ ಎಲ್ಲಾ ಸಂಚಿಕೆಯನ್ನು ಕಳುಹಿಸಿರುತ್ತೇವೆ. ಹಾಗೆ ಕಳುಹಿಸಿರದಿದ್ದಲ್ಲಿ ತಾವು ಪತ್ರ ಬರೆದು ತರಿಸಿಕೊಳ್ಳಬೇಕು. ನೀವು ಮಧ್ಯದಲ್ಲಿ ಚಂದಾದಾರರಾಗಿದ್ದರೂ ಸಹ ನೀವು ಹಿಂದಿನ ಸಂಚಿಕೆ ತರಿಸಿಕೊಂಡು ಮತ್ತೆ ಜನವರಿಗೆ ಚಂದಾ ನವೀಕರಿಸಿದಲ್ಲಿ ನಮಗೆ ಎಲ್ಲಾ ದೃಷ್ಟಿಯಿಂದಲೂ ಅನುಕೂಲವಾಗುತ್ತದೆ. ದಯವಿಟ್ಟು ಎಲ್ಲಾ ಚಂದಾದಾರರೂ ಈ ತಿಂಗಳು ಹಾಗೂ ಮುಂದಿನ ತಿಂಗಳ ಒಳಗಾಗಿ 1990 ನೇ ಇಸವಿಗೆ ತಮ್ಮ ಚಂದಾವನ್ನು ನವೀಕರಿಸಬೇಕಾಗಿ ವಿನಂತಿಸಿಕೊಳ್ಳುತ್ತೇವೆ.

ಸಂ. ಮಂ..

# ಮಹಿಳೆ ಮತ್ತು ಚುನಾವಣೆ

ಮಹಿಳೆಯರ ಮತಗಳನ್ನು ಒಲಿಸಿಕೊಳ್ಳುವ ಉದ್ದೇಶದಿಂದ ಪ್ರತಿಯೊಂದು ರಾಜಕೀಯ ಪಕ್ಷಗಳು ನೀಡುತ್ತಿದ್ದ ಆಶ್ವಾಸನೆಗಳು, ಚುನಾವಣೆಯಲ್ಲಿ ಮಹಿಳೆಯರ ಪಾತ್ರ, ಸೀಟು ಹಂಚಿಕೆಗಳಲ್ಲಿ ಸ್ತ್ರೀಯರಿಗಾದ ಅನ್ಯಾಯ ಮುಂತಾದವುಗಳ ಚರ್ಚೆಗೆ ಮುಕ್ತಾಯ ಹಾಡಿದ್ದು ನಾಲ್ಕು ದಿನದ ಚುನಾವಣಾ ಸಂತೆ. ಜನರ ಆಯ್ಕೆಯ ಒಲವು ನಮ್ಮ ಮುಂದಿದೆ. ಜನರನ್ನು ಪ್ರತಿನಿಧಿಸುತ್ತವೆಯೆನ್ನುವುದಕ್ಕಿಂತ, ಚುನಾವಣೆಯ ನಂತರ ತಮ್ಮನ್ನು ತಾವೇ ಪ್ರತಿನಿಧಿಸಿಕೊಳ್ಳುವ ನಮ್ಮ ರಾಜಕಾರಣಿಗಳು, ಪಕ್ಷಗಳು ಸ್ತ್ರೀಯರ ಮತಗಳನ್ನು ಒಲೈಸಿಕೊಳ್ಳಲು ನೀಡಿದ ಆಶ್ವಾಸನೆಗಳ ಹಿಂದಿರುವ ಉದ್ದೇಶ, ಸ್ತ್ರೀಯರು ರೂಢಿಸಿಕೊಳ್ಳಬೇಕಾದ ರಾಜಕೀಯ ನಿಲುವುಗಳನ್ನು ಚರ್ಚಿಸುವುದೇ ಈ ಲೇಖನದ ಉದ್ದೇಶ.

ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರ ಜೀವನವನ್ನು ರಾಜಕೀಯ ವ್ಯವಸ್ಥೆಯಿಂದ ಬೇರ್ಪಡಿಸಲು ಸಾಧ್ಯವಿಲ್ಲ. ನಾಲ್ಕುಗೋಡೆಯ ಒಳಗೆ ದುಡಿಯುತ್ತಿದ್ದ ಮಹಿಳೆ ಇಂದು ಜೀವನದ ನಾನಾ ಕ್ಷೇತ್ರಕ್ಕೆ ಕಾಲಿರಿಸಿದ್ದರೂ ಆ ಕ್ಷೇತ್ರಗಳಲ್ಲಿ ಅವಳು ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತಿಲ್ಲವೆಂಬುದು ತೀರಾ ಸ್ಪಷ್ಟ.

ದುಡಿಯುತ್ತಿರುವ ಮಹಿಳೆ ಆರ್ಥಿಕವಾಗಿ ಸ್ವಾವಲಂಬಿಯಾಗಿದ್ದರೂ ಅವಳ ಒಟ್ಟು ವ್ಯಕ್ತಿತ್ವವನ್ನು ಕುಟುಂಬ, ಕೌಟುಂಬಿಕ ಜವಾಬ್ದಾರಿಗಳ ಹಿನ್ನೆಲೆಯಲ್ಲಿಯೇ ನೋಡಲಾಗುತ್ತಿದೆ. ಇಂತಹ ಸೀಮಿತ ವೃತ್ತದಿಂದ ಬದಲಿಸಿಕೊಂಡು ಇತರ ಕ್ಷೇತ್ರಗಳಲ್ಲಿ ಕ್ರಿಯಾತ್ಮಕವಾಗಿ ಕೆಲಸ ಮಾಡಲು ಪೂರಕವಾದ ಸಾಂಸ್ಕೃತಿಕ ವಾತಾವರಣ ಸೃಷ್ಟಿಯಾಗಿಲ್ಲದಿರುವುದು ಸ್ತ್ರೀಯು ಪ್ರಸ್ತುತದಲ್ಲಿ ನಿರ್ವಹಿಸುತ್ತಿರುವ ಪಾತ್ರಕ್ಕೆ ಕಾರಣವಾಗಿದೆ. ಇಂತಹ ಸಂದರ್ಭದಲ್ಲಿ ಮಹಿಳೆಯರ ಜೀವನವನ್ನ ರಾಜಕೀಯದಿಂದ ಬೇರ್ಪಡಿಸಲು ಸಾಧ್ಯವಿಲ್ಲವೆಂದಾಗ, ಅದು ಅವಳ ಕ್ರಿಯಾತ್ಮಕ ಭಾಗವಹಿಸುವಿಕೆಯನ್ನು ಪ್ರತಿಬಿಂಬಿಸುವುದಿಲ್ಲ. ಭ್ರಷ್ಟ ರಾಜಕೀಯ ವ್ಯವಸ್ಥೆಯಿಂದಾಗಿ ಮಹಿಳೆಯರಿಗಾಗುತ್ತಿರುವ ತೊಂದರೆ, ಬೆಲೆ ಏರಿಕೆ, ಇತ್ಯಾದಿಗಳ ಹಿನ್ನೆಲೆಯಲ್ಲಿ ನೋಡಲಾಗುತ್ತದೆ. ಒಂದು ಹಂತದಲ್ಲಿ ಇದನ್ನು ಒಪ್ಪಿಕೊಳ್ಳಬಹುದಾದರೂ, ಮಹಿಳೆಯರ ಜೀವನವನ್ನು ರಾಜಕೀಯ ವ್ಯವಸ್ಥೆಯಿಂದ ಬೇರ್ಪಡಿಸಲು ಸಾಧ್ಯವಿಲ್ಲವೆಂದಾಗ ಅದು ಒಂದು ಮೂಲಭೂತವಾದ ಬದಲಾವಣೆಯನ್ನು ಸೂಚಿಸುತ್ತದೆ.

ಮಹಿಳೆಯರ ಹಾಗೂ ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಯನ್ನು ನೋಡುವ ಒಂದು ದೃಷ್ಟಿಕೋನದ ಕೊರತೆಯೇ ಈ ಎಲ್ಲಾ ಸಮಸ್ಯೆಗಳ ಮೂಲವೆಂದರೆ ತಪ್ಪಾಗಲಾರದು.

ಭಾರತ ನೆಹರೂ ಮನೆತನಕ್ಕೆ ಮಾತ್ರ ಮೀಸಲಾಗಿರಬೇಕೆನ್ನುವ, ಜನತೆಯ ಹೆಸರಿನಲ್ಲಿ ಕಿತ್ತಾಡುವ, ಜನಸಾಮಾನ್ಯರ ಹಿತಾಸಕ್ತಿ ಕಾಪಾಡುವ ಎಡಪಂಥದ ಮೌಲ್ಯಗಳಿಗೆ ತಿಲಾಂಜಲಿ ನೀಡುವ, ಕೋಮುಭಾವನೆಗಳನ್ನು ಸಂಸ್ಥೀಕರಿಸುವಂತ ಪಕ್ಷಗಳು ನಮ್ಮ ಮಹಿಳೆಯರಿಗೆ ನೀಡಿರುವ ಆಶ್ವಾಸನೆಗಳ ಪಟ್ಟಿಯತ್ತ ಗಮನ ನೀಡುವುದು ಅತ್ಯಗತ್ಯ. ಮಹಿಳೆಯರ ಸಮಸ್ಯೆಗಳತ್ತ ಕಣ್ಣು ಹಾಯಿಸದ, ಮಹಿಳೆಯರ ಸಮಸ್ಯೆ ಮತ್ತು ಅಭಿವೃದ್ಧಿಗಳ ಬಗ್ಗೆ ಯಾವುದೇ ನಿಲುವುಗಳನ್ನು ಹೊಂದದ ಈ ಪಕ್ಷಗಳು ನೀಡಿರುವ ಆಶ್ವಾಸನೆಗಳು ಕುತೂಹಲಕಾರಿಯಾಗಿವೆ. ಕಾಲ ಬದಲಾದಂತೆ ಮತದಾರರಿಗೆ ನೀಡುತ್ತಿರುವ ಆಶ್ವಾಸನೆಗಳಲ್ಲೂ ಗಣನೀಯ ಬದಲಾವಣೆಗಳು ಕಂಡುಬರುತ್ತವೆ. ಈ ಗಣನೀಯ ಬದಲಾವಣೆಗಳು "ಪ್ರಗತಿಪರತೆ" ಯ ಸಂಕೇತವೆಂದು ನಂಬುವಷ್ಟು ಮೂರ್ಖರು ನಮ್ಮ ಮತದಾರರಲ್ಲ!

ಒಂದು ದಶಕದ ಅವಧಿಯಲ್ಲಿ ರಾಷ್ಟ್ರವ್ಯಾಪ್ತಿಯಂತ ಮಹಿಳಾ ಸಂಘ ಸಂಸ್ಥೆಗಳು ತಮ್ಮ ಹೋರಾಟದ ಮೂಲಕ ಎತ್ತಿದ ಪ್ರಶ್ನೆಗಳನ್ನು ಹಾಗೂ ಬೇಡಿಕೆಗಳನ್ನು ಈ ರಾಜಕೀಯ ಪಕ್ಷಗಳು ಸುಲಭವಾಗಿ ಹಾಗೂ ಸರಳವಾಗಿ ಬಂಡವಾಳ ಮಾಡಿಕೊಂಡು ತಮ್ಮ ಪ್ರಗತಿಪರತೆಯ ಮುಖವಾಡ ಮಾಡಿಕೊಳ್ಳುತ್ತಿವೆ.

ಪ್ರಜಾಪ್ರಭುತ್ವದ ಹೆಸರಿನಲ್ಲಿ ಭಾರತವನ್ನು ತಮ್ಮ ಮನೆತನದ ಸೊತ್ತಾಗಿ ಮಾಡಿಕೊಳ್ಳಲು ಯತ್ನಿಸುತ್ತಿರುವ ರಾಜೀವ ಗಾಂಧಿ ತಮ್ಮೆಲ್ಲಾ ರಾಜಕೀಯ ಕುತಂತ್ರಗಳೊಂದಿಗೆ ಮಹಿಳಾ ಮತದಾರರಿಗೆ ಒಂದಾದ ಮೇಲೊಂದರಂತೆ ಆಶ್ವಾಸನೆ ನೀಡುತ್ತಾ ಬಂದರು. ಕಳೆದ ವರ್ಷ ನವೆಂಬರ್ ಎರಡರಂದು ಎ. ಐ. ಸಿ. ಸಿ. ಯ ರಾಷ್ಟ್ರೀಯ ಸಭೆಯಲ್ಲಿ ಮಹಿಳೆಯರಿಗೆ (ರಾಜ್ಯವಿಧಾನ ಸಭೆಳಿಗೆಗ) ಶೇ.೩೦ರಷ್ಟು ಮೀಸಲಾತಿಯನ್ನು ನೀಡಬೇಕೆಂದು ಒತ್ತಾಯಿಸಲಾಯಿತಲ್ಲದೆ, ಭುವನೇಶ್ವರದಲ್ಲಿ ನಡೆದ ಸಭೆಯಲ್ಲಿ ಪಂಚಾಯತ್ ರಾಜ್ ವಿಭಾಗಗಳಲ್ಲಿ ಸ್ತ್ರೀಯರಿಗೆ ಶೇ ೩೦ರಷ್ಟು ಮೀಸಲಾತಿಯನ್ನು ನೀಡಬೇಕೆಂಬ ಬೇಡಿಕೆಯನ್ನು ಮುಂದಿಡಲಾಯಿತು. ಈ ಪ್ರಕಾರ ರಾಜೀವ್ ಗಾಂಧಿಯವರು ಮಹಿಳೆಯರಿಗೆ ಶೇ. ೩೦ರಷ್ಟು ಮೀಸಲಾತಿ ನೀಡುವುದಾಗಿ ಭರವಸೆ ನೀಡಿದ್ದನ್ನು ಚುನಾವಣಾ ಸಂದರ್ಭದಲ್ಲಿ, "ಪಂಚಾಯತ್ ರಾಜ್ಯದಲ್ಲಿ ಸ್ತ್ರೀಯರಿಗೆ ಶೇ. ೩೦ರಷ್ಟು ಮೀಸಲಾತಿ ನೀಡುತ್ತೇವೆ ಎಂದು ಭರವಸೆ ಕೊಟ್ಟಿದ್ದೇನೆ. ಈಗಿನ ಚುನಾವಣೆಯಲ್ಲಿ ಸ್ತ್ರೀಯರಿಗೆ ಟಿಕೆಟ್ ನೀಡಲು ಪ್ರಯತ್ನಿಸಿದೆವು. ಆದರೆ ಅರ್ಹತೆಯುಳ್ಳ ಮಹಿಳೆಯರೇ ಸಾಕಷ್ಟು ಸಂಖ್ಯೆಯಲ್ಲಿ ದೊರೆಯಲಿಲ್ಲ" ಎಂದು ತಳ್ಳಿಹಾಕಿದರು. ಈಗಿನ ಚುನಾವಣೆಯಲ್ಲಿ ಮೀಸಲಾತಿಯ ಪ್ರಮಾಣ ಶೇ. ೮ರಷ್ಟು. ಚುನಾವಣೆಯ ಕೆಲವು ದಿನಗಳ ಮುನ್ನ ೫೦೦೦ ಕೋಟಿ ರೂ. ವೆಚ್ಚದ ಇಂದಿರಾ ಯೋಜನೆಯನ್ನು ಪ್ರಕಟಿಸುವುದರ ಮೂಲಕ ಮಹಿಳಾ ಮತಗಳಿಗೆ ಲಗ್ಗೆ ಹಾಕುವ ರಾಜೀವ ಗಾಂಧಿಯವರ ತಂತ್ರವನ್ನು ಎಲ್ಲಾ ವಿರೋಧ ಪಕ್ಷಗಳು ವಿರೋಧಿಸಿದ್ದರು,

ರಾಷ್ಟ್ರೀಯ ರಂಗದ ಸಭೆ ಮಹಿಳೆಯರಿಗೆ ನೀಡಿದ ಆಶ್ವಾಸನೆಗಳೆಲ್ಲಾ ಭೋಗಸ್ ಎಂದು ಕರೆಯುತ್ತಾ ಮಹಿಳೆಯರಿಗೆ ಪಂಚಾಯತ್ ರಾಜ್ಯದಲ್ಲಿ ೩೦ರಷ್ಟು ಮೀಸಲಾತಿಯನ್ನು ನೀಡುವುದಾಗಿ, ಆಶ್ವಾಸನೆ ಕೊಟ್ಟಿತು. ರಾಜಕೀಯ ನಿರ್ಣಯಗಳಲ್ಲಿ ಮಹಿಳೆಯರ ಶಕ್ತಿ ಹಾಗೂ ಜವಾಬ್ದಾರಿಗಳನ್ನು ತೀವ್ರಗೊಳಿಸುವ, ನೌಕರಿಗಳಲ್ಲಿ ಸ್ತ್ರೀಯರಿಗೆ ಶೇಕಡ ೩೫ ಮೀಸಲಾತಿ ನೀಡುವುದು. ಕರ್ನಾಟಕದಲ್ಲಿ ತಾಳಿಭಾಗ್ಯ ವಿಧವೆಯರಿಗೆ ಮಾಸಾಶನ ಮುಂತಾದವುಗಳಿಗೆ ಆದ್ಯತೆ ನೀಡುವುದು.

ತುರ್ತುಪರಿಸ್ಥಿತಿ, ಕಾಂಗ್ರೆಸ್ ವಿರೋಧ ನೀತಿಯಿಂದಾಗಿ ಮಾತ್ರ ಬಹುಜನರ ಮನ್ನಣೆಗಳಿಸಿಕೊಂಡು ಅಧಿಕಾರಕ್ಕೆ ಬಂದ ಜನತಾ ಪಕ್ಷ ಇಂದು ಆಂತರಿಕ ಜಗಳಗಳಿಂದಾಗಿ ಹರಿದು ಹಂಚಿ ಹೋಗಿ ಜಾತಿ ರಾಜಕಾರಣದ ತುಂಡತ್ವ ವಹಿಸಿಕೊಂಡಿದೆ. ಜನತಾದಳ, ಹಾಗೂ ಜನತಾಪಕ್ಷಗಳ ಪಾಲಿಸಿಗಳಲ್ಲಿ ಮೂಲಭೂತವಾದ ವ್ಯತ್ಯಾಸಗಳಿಲ್ಲವಾದರೂ. ಜನತಾಪಕ್ಷ ಮಹಿಳೆಯರ ಎಲ್ಲ ಸಮಸ್ಯೆಗಳ ಪರಿಹಾರಕ್ಕೆ ಸ್ವಾವಲಂಬನೆಯೊಂದೆ ದಾರಿ ಎನ್ನುತ್ತದೆ. ಜನತಾಪಕ್ಷ ಗೃಹಕೈಗಾರಿಕೆಗಳಲ್ಲಿ, ತರಬೇತಿ ಕೇಂದ್ರಗಳಲ್ಲಿ ಅನಾಥ ಹಾಗೂ ವಿಧವೆಯರಿಗೆ ಆಧ್ಯತೆ, ದುಡಿಯುವರಿಗೆ ವಸತಿನಿಲಯಗಳು ವಧುದಹನ, ಮಾನಭಂಗ ಪ್ರಕರಣಗಳಲ್ಲಿ ಉಗ್ರಶಿಕ್ಷೆ, ಗ್ರಾಮೀಣ, ಮಹಿಳೆಯರಿಗೆ ಶೌಚಾಲಯ ಮುಂತಾದ ಆಶ್ವಾಸನೆಗಳನ್ನು ಮಹಿಳೆಯರಿಗೆ ನೀಡಿತ್ತು.

ಚುನಾವಣೆಯ ಸಂದರ್ಭದಲ್ಲಿ "ಶಿಲಾನ್ಯಾಸ"ದ ಅಮಲನ್ನು ಜನರಲ್ಲಿ ಕೆರಳಿಸಿ, ಜನರ ಧಾರ್ಮಿಕ ಭಾವನೆಗಳಿಗೆ ವ್ಯವಸ್ಥಿತವಾಗಿ ಕೋಮು ಭಾವನೆಗಳನ್ನು ಆರೋಪಿಸುವ ಪ್ರಯತ್ನ ನಡೆಸಿದ ಭಾರತೀಯ ಜನತಾ ಪಕ್ಷ ಸಹ ಸ್ತ್ರೀಯರಿಗೆ ಪಂಚಾಯಿತ್ ರಾಜ್‌ಗಳಲ್ಲಿ ಶೇ. ೩೦ರಷ್ಟು ಮೀಸಲಾತಿಯ ಭರವಸೆಯನ್ನು ನೀಡುತ್ತದೆ. ರೂಪಾ ಕನ್ವರ್ ಸತಿ ಹೋದ ಸಂದರ್ಭದಲ್ಲಿ ಸಮಯೋಚಿತ ಮೌನ ವಹಿಸಿದ ಬಿ.ಜೆ.ಪಿ. ಮುಸ್ಲಿಂ ಸೋದರಿಯರ ಅಲ್ಪ ಸಂಖ್ಯಾತತೆಯನ್ನು ತಳ್ಳಿಹಾಕುವುದರ ಜೊತೆಗೆ ಸಮಾನ ನಾಗರೀಕ ಸಂಹಿತೆಯನ್ನು ಬೆಂಬಲಿಸುವುದು ಮಹಿಳಾ ದೃಷ್ಟಿಕೋನದಿಂದ ಅಲ್ಲ. ಮತೀಯ ದೃಷ್ಟಿಕೋನದಿಂದ. ನೀರಿನ ಸಮಸ್ಯೆ, ಮಕ್ಕಳಿಗೆ ಪುಸ್ತಕ ಪೂರೈಕೆ, ಕೃಷಿ ಕಾರ್ಮಿಕ ಮಹಿಳೆಯರಿಗೆ ಹೆರಿಗೆ ಭತ್ಯೆ, ಮಹಿಳೆಯರ ಹಕ್ಕು ಭಾದ್ಯತೆ ರಕ್ಷಣೆಗಾಗಿ ಆಯೋಗ, ಮಹಿಳೆಯರ ಶಿಕ್ಷಣ, ಉದ್ಯೋಗ, ಮುಂತಾದವುಗಳಿಗೆ ಆದ್ಯತೆ ಇವು ಮಹಿಳೆಯರ ಪರವಾಗಿ ಬಿ.ಜೆ.ಪಿ.ಯ ನಿಲುವುಗಳು.

ಮಹಿಳೆಯರನ್ನು ಶೋಷಿಸುವಲ್ಲಿ ಪುರುಷ ಯಜಮಾನ್ಯ ಸಂಸ್ಕೃತಿಯ ಅಸ್ತಿತ್ವವನ್ನು ಸಂಪೂರ್ಣವಾಗಿ ತಳ್ಳಿ ಹಾಕುವುದರ ಜೊತೆಗೆ ಸ್ತ್ರೀಯರ ವಿಶಿಷ್ಟ ಸಮಸ್ಯೆಗಳನ್ನು ಗುರುತಿಸಲು ಹಿಂಜರಿಯುವ, ಆರ್ಥಿಕತೆಯಲ್ಲಿ ಮಾತ್ರ ಎಲ್ಲ ಉತ್ತರ ಹುಡುಕುವ ಸಿ.ಪಿ.ಐ. ಹಾಗೂ ಸಿ.ಪಿ.ಐ.ಎಂ. ಸಹ ಮಹಿಳಾ ಮತದಾರರಿಗೆ ಹಲವಾರು ಆಶ್ವಾಸನೆಗಳನ್ನು ಜನರ ಮುಂದಿಟ್ಟಿವೆ. ಇತರ ಪಕ್ಷಗಳಂತೆ ಕಾಂಗ್ರೆಸನ್ನು ವಿರೋಧಿಸುವುದೇ ಈ

ಪಕ್ಷಗಳ ಪ್ರಮುಖ ಗುರಿಯಾಗಿವೆ(ಸಿ.ಪಿ.ಐ.ನ ಪ್ರಣಾಳಿಕೆ ದೊರೆಯದಿದ್ದುದರಿಂದ ಇಲ್ಲಿ ಅದನ್ನು ಬಿಡಲಾಗಿದೆ)

ಕಾಂಗ್ರೆಸ್ ಆಡಳಿತದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ, ದಬ್ಬಾಳಿಕೆಗಳು ಅವ್ಯಾಹತವಾಗಿ ಹೆಚ್ಚುತ್ತಾ ಮುಂದುವರೆದಿವೆ, ವರದಕ್ಷಿಣೆ ಸಾವುಗಳು ಅತ್ಯಧಿಕಗೊಂಡಿವೆ. "ಸತಿ" ಹೆಸರಿನಲ್ಲಿ ಮಹಿಳೆಯರನ್ನು ಬಲತ್ಕಾರವಾಗಿ ಸಜೀವ ದಹನ ಮಾಡುವುದನ್ನು ತಡೆಗಟ್ಟುವಲ್ಲಿ ಕಾಂಗ್ರೆ ಸರಕಾರವು ವಿಫಲಗೊಂಡಿದೆ ಎಂದು ಹೇಳುತ್ತಾ ಸ್ತ್ರೀಯರಿಗೆ ನೌಕರಿಗಳನ್ನು, ಮೀಸಲಾತಿಯನ್ನು ನೀಡುವುದಕ್ಕಿಂತ ಅವರಿಗೆ ಕೆಲಸ ಉಳಿಸಿಕೊಡುವುದು ಮುಖ್ಯವೆಂದು ಸಿ.ಪಿ.ಎಂ. ಸಾರುತ್ತದೆ. ಅತ್ಯಾಚಾರದ ಕೊನೆ, ಸಂಬಳ ಸೇವಾ ಭಡ್ತಿಯಲ್ಲಿ ಭೇದಭಾವ ನಿವಾರಣೆ, ಉದ್ಯೋಗಾವಕಾಶ ವಿಸ್ತರಣೆ, ಮಹಿಳಾ ಕೃಷಿ ಕಾರ್ಮಿಕರಿಗೆ, ಅಸಂಘಟಿತ ಉದ್ದಿಮೆಗಳ ಮಹಿಳೆಯರಿಗೆ ಸಾಮಾಜಿಕ ಸೌಲಭ್ಯ, ಆಸ್ತಿ ಮತ್ತಿತರ ಹಕ್ಕುಗಳಲ್ಲಿ ಮಹಿಳೆಯರಿಗೆ ಸಮಾನ ಹಕ್ಕು ಮುಂತಾದವು.

ಮೇಲಿನ ರಾಜಕೀಯ ಪಕ್ಷಗಳು ಮಹಿಳೆಯರಿಗೆ ನೀಡಿದ ಚುನಾವಣಾ ಆಶ್ವಾಸನೆಗಳನ್ನು ಗಮನಿಸಿದಾಗ ಈ ಆಶ್ವಾಸನೆಗಳು, ಭರವಸೆಗಳು ಆ ಪಕ್ಷಗಳು ಮಹಿಳೆಯರಿಗೆಂದು ಹಮ್ಮಿಕೊಂಡ ಕಾರ್ಯಕ್ರಮದಿಂದ ಮೂಡಿಬಂದವುಗಳೇನಲ್ಲ ಎಂಬುದು ಹೊಸ ವಿಚಾರವಲ್ಲ. ಕರ್ನಾಟಕದಲ್ಲಿ ಬೆಳೆಸಿಕೆಯಲ್ಲಿರುವ, ಹಾಗೂ ರಾಷ್ಟ್ರಾದ್ಯಂತ ಇರುವ ಮಹಿಳಾ ಸಂಘ ಸಂಸ್ಥೆಗಳು ಸರ್ಕಾರದ ಮುಂದೆ, ಸಾರ್ವಜನಿಕರ ಮುಂದೆ ಇಡುತ್ತಿರುವ ಬೇಡಿಕೆಗಳನ್ನು ಈ ಪಕ್ಷಗಳು ಬಂಡವಾಳ ಮಾಡಿಕೊಳ್ಳುತ್ತಿವೆ.

ಮಹಿಳೆಯರ ಅಭಿವೃದ್ಧಿಗೆ ಸ್ಪಷ್ಟವಾದ, ಖಚಿತವಾದ ಯೋಜನೆ ಹಮ್ಮಿಕೊಳ್ಳದ ಯಾವುದೇ ರಾಜಕೀಯ ಪಕ್ಷ ಮಹಿಳೆಯರಿಗೆ ನೀಡುವ ಭರವಸೆಗಳು ಕೇವಲ ಹುಸಿ ಭರವಸೆಗಳಾಗಿರುತ್ತವೆ. ಚುನಾವಣೆಯ ಸಂದರ್ಭದಲ್ಲಿ ಮತಯಾಚನೆಯ ಬಂಡವಾಳವಾಗುತ್ತವೆ.

ಪ್ರಸ್ತುತದಲ್ಲಿರುವ ಭ್ರಷ್ಟ, ದುರಾಡಳಿತ, ಹಿಂಸೆ, ರಾಜಕೀಯ ನಾಯಕರುಗಳ ಮೇಲಿರುವ ಆರೋಪಗಳು ಮುಂತಾದವುಗಳನ್ನು ನೋಡಿದಾಗ, ಒಂದು ಪಕ್ಷ, ಸ್ಪಷ್ಟವಾದ, ಖಚಿತವಾದ, ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕೆಂಬುದು ಒಂದು ಸಾಮಾಜಿಕ ವ್ಯಂಗ್ಯದ ರೀತಿಯಲ್ಲಿ ಕಂಡುಬರುತ್ತದೆ. ಭ್ರಷ್ಟತೆಯಲ್ಲಿ ಸ್ವಜನಪಕ್ಷಪಾತ, ಹೆಂಡತಿಯರನ್ನು ಹಿಂಸಿಸುವುದು, ಹುಡುಗಿಯರನ್ನು ತಮ್ಮ ಕಾಮತೃಷೆಗೆ ಬಳಸಿಕೊಳ್ಳುವುದು, ಮುಂತಾದವು ಚುನಾವಣೆಗೆ ನಿಲ್ಲುವ ಅಭ್ಯರ್ಥಿಗಳ ಅರ್ಹತೆಗಳು ಎಂಬಷ್ಟು ಮಟ್ಟಿಗೆ ಸಾಮಾನ್ಯವಾಗಿದೆ. ಇಂತಹ ವಾತಾವರಣದಲ್ಲಿ ಮಹಿಳೆಯರು ಬೆಳೆಸಿಕೊಳ್ಳಬೇಕಾಗುತ್ತದೆ, ರಾಜಕೀಯ ಪ್ರಜ್ಞೆಯ ಬಗ್ಗೆ ಆದರ್ಶವೆನಿಸಿದರೂ ಒಂದೆರಡು ಮಾತುಗಳನ್ನು ಬರೆಯಲೇ ಬೇಕಾಗುತ್ತದೆ.

ಮತಚಲಾವಣೆಯು ಒಂದು ಅಭಿವ್ಯಕ್ತಿಯಾದರೂ ಸ್ತ್ರೀಯರ ಮತಚಲಾವಣೆಯು ಒಂದು ಪ್ರಜ್ಞಾಪೂರ್ವಕ ರಾಜಕೀಯ ಕ್ರಿಯೆಯಾಗಿ ಅಭಿವ್ಯಕ್ತಿಗೊಳ್ಳುತ್ತಿದೆಯೆಂದು ಒಪ್ಪುವುದು ಅಸಾಧ್ಯವಾದ ಮಾತು. ಮಹಿಳೆಯರು ತಾವು ವಿಶಿಷ್ಟ ಸಮಸ್ಯೆಗಳತ್ತ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದರ ಜೊತೆಗೆ ರಾಷ್ಟ್ರದ ದಿನನಿತ್ಯದ ಆಗು ಹೋಗುಗಳ ಬಗ್ಗೆ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಜನಸಾಮಾನ್ಯರ ಹಿತಾಸಕ್ತಿಯನ್ನು ಬಲಿಕೊಡುವ ಶಕ್ತಿ, ವ್ಯವಸ್ಥೆಗಳ ಬಗ್ಗೆ ಜಾಗರೂಕತೆಯಿಂದಿರಬೇಕಾಗುತ್ತದೆ. ಭ್ರಷ್ಟತೆ, ದುರಾಡಳಿತ, ಕೋಮುಶಕ್ತಿ, ಸ್ವಜನಪಕ್ಷಪಾತ, ಮುಂತಾದವುಗಳ ಬಗ್ಗೆಯ ಪ್ರಜ್ಞಾಪೂರ್ವಕ ನಿಲುವುಗಳನ್ನು ರೂಢಿಸಿಕೊಂಡಾಗ ಮಾತ್ರ ಮಹಿಳೆಯರ ರಾಜಕೀಯ ಪ್ರಜ್ಞೆಗೆ ಒಂದು ಅರ್ಥ ಸಿಗುತ್ತದೆ.

ರಾಜೇಶ್ವರಿ ಎಚ್. ಎಸ್.



# ಮಹಿಳೆ ಮತ್ತು ಬಂಡಾಯ ಧೋರಣೆ

ಸಾಹಿತ್ಯಕ್ಕೂ ಜನಜೀವನಕ್ಕೂ ಒಂದು ಬಗೆಯ ನಿಕಟನಂಟು. ಕೇವಲ ಕಲ್ಪನೆಗಳಿಗೆ ಅಥವಾ ಆತ್ಮ ಸಂತೋಷಕ್ಕಾಗಲೀ ಬರೆಯುವುದು ಹವ್ಯಾಸಿ ವೃತ್ತಿಯೆನಿಸಿದರೆ, ಅದು ಕರ್ತವ್ಯಲೋಪಿತವೆಂದೇ ಹೇಳಬೇಕು. ನಿಜವಾದ ಸಾಹಿತ್ಯ ಜನ ಸಾಮಾನ್ಯರ ಜೀವನವನ್ನು ಪ್ರತಿಬಿಂಬಿಸುವ ಕನ್ನಡಿಯಾಗಬೇಕಾಗುತ್ತದೆ.

ಭಾರತ ದೇಶದಲ್ಲಿ ಕರ್ನಾಟಕವನ್ನೊಳಗೊಂಡಂತೆ ಮಹಿಳೆಯ ಸ್ಥಾನಮಾನ ಹಿಂದಿನಿಂದಲೂ ಬಲು ಇಕ್ಕಟ್ಟಿನಿಂದಲೇ ಸಾಗಿಬಂದಿದೆ. ಗಂಡಸೇ ಪ್ರಧಾನವಾಗಿ ಬೆಳೆದು ಬಂದಿರುವ ಈ ಸಂಸ್ಕೃತಿಯಲ್ಲಿ ಒಮ್ಮೊಮ್ಮೆ ಬೆಳಕಿಗೆ ಬಂದು ಹೆಸರುಗಳಿಸಿದ ಮಹಿಳೆಯರನ್ನೀಗ ನಾವು ಅಭಿನಂದಿಸಬೇಕಾಗುತ್ತದೆ. ಅವರುಗಳು ಏರುವ ಮೆಟ್ಟಿಲು ಮನೆಯ ಪರಿಸರದಲ್ಲಿಯೇ ಸಿಕ್ಕ ವರಪ್ರಸಾದವೋ ಇಲ್ಲಾ ಉದಾರ ಮನಸ್ಸಿನ ಪತಿಯ ಪ್ರೋತ್ಸಾಹದ ಪ್ರೇರಣೆಯೋ ಆಗಿಯೇ ಇರುವುದು ತೀರ ಸಾಮಾನ್ಯ.

ಪುರುಷನಂತೆ ಸ್ವತಂತ್ರವಾಗಿ ಸ್ತ್ರೀ ನಮ್ಮ ದೇಶದಲ್ಲಿ ಸಾಹಿತ್ಯ ಜಗತ್ತಿನಲ್ಲಿ ವಿಹರಿಸಲ್ಲವೆಂದರೆ ಉತ್ಪ್ರೇಕ್ಷೆಯಿಲ್ಲ. ನಮ್ಮ ದೇಶದ ಸಾಮಾಜಿಕ ಮೌಲ್ಯಗಳು ಹೆಜ್ಜೆ ಹೆಜ್ಜೆಗೂ ಹೆಂಗಸನ್ನು ಹಿಡಿತದಲ್ಲಿಟ್ಟಿವೆ. ಮೌಲ್ಯಗಳ ಕಟ್ಟೊಡೆದು ಧೈರ್ಯದಿಂದ ಪ್ರಗತಿಪಥದಲ್ಲಿ ಮುಂದೆ ಸಾಗಲು ಭಾರತೀಯ ಮಹಿಳೆಗೆ ಕಷ್ಟಸಾಧ್ಯ. ಧರ್ಮ, ದೇವರು, ಗುರು, ಹಿರಿಯರು, ಪತಿ, ಸಂಸ್ಕೃತಿ, ಜಾತಿ ಇನ್ನಿತರ ಹಲವಾರು ಬಗೆಯ ಮೌಲ್ಯ ಸಂಕೋಲೆಗಳು ಮಹಿಳೆಯನ್ನು ಪರಂಪರಾನುಗತವಾಗಿ ಬಂಧಿಸುತ್ತಲೇ ಬಂದಿವೆ.

ಮಹಿಳೆ ಮೃದು ಸ್ವಭಾವದವಳಾಗಿರಬೇಕು. ವಿಧೇಯಳಾಗಿರಬೇಕು. ಮನೆತನದ ಸ್ಥಾನಮಾನಗಳನ್ನು ಕಾಪಾಡಬೇಕು, ಸಂಸ್ಕೃತಿ ಪರಿಪಾಲಿಸಬೇಕು ಅರ್ಥಾತ್ ಆಕೆ ದೇವತೆಯಂತಿರಬೇಕು ಎಂಬಿಥ ಸಂಪ್ರದಾಯಗಳು ಬೆಳೆದು ಬಂದಿವೆ. ಇದರಿಂದಾಗಿ ಎಷ್ಟೋ ಸಲ ಎಲ್ಲ ವಿಧವಾದ ಪ್ರಗತಿಗೆ ಮಹಿಳೆಗೆ ಮಹಿಳೆಯೇ ವಿರೋಧಿಯಾಗಿರುವಳೆಂದು ಹೇಳಬೇಕಾದುದು ಅನಿವಾರ್ಯವಾಗುತ್ತದೆ. ಹೆಣ್ಣು ಮಗು ಹುಟ್ಟಿದರೆ ಅನಿಷ್ಟ ಪಡುವುದರಿಂದ ಮೊದಲಾಗಿ ವಿದ್ಯಾಭ್ಯಾಸದ ವಿರೋಧ, ಕಡ್ಡಾಯ ಮದುವೆ, ಮೌಲ್ಯಗಳ ಕಟ್ಟುನಿಟ್ಟಾದ ಪಾಲನೆ ಜಾತಿವರ್ಗಗಳ ಕೀಳು–ಮೇಲರಿಮೆಗಳ ರೂಢನೆ, ಎಲ್ಲವೂ ಮಹಿಳೆಗೆ ಚಾಚೂ ತಪ್ಪದೆ ಬೋಧಿಸಲ್ಪಟ್ಟಿರುತ್ತದೆ. ತಮ್ಮ ಮಕ್ಕಳನ್ನೂ ಈ ಸಾಂಪ್ರದಾಯಿಕ ಸಂಕೋಲೆಗಳ ಮಹಿಳೆ ಬಂಧಿಸಿ ಬೆಳೆಸುವಾಗ, ಅವರಲ್ಲಿ ಸಂಕುಚಿತ ಮನೋಭಾವನೆ ಬೆಳೆಯದಿರಲು ಹೇಗೆ ತಾನೇ ಸಾಧ್ಯ ?

ಮಹಿಳೆಯು ಅನಾದಿಕಾಲದಿಂದಲೂ ಎರಡು ಬಗೆಯ ದಾಸ್ಯದಿಂದ ಒಳಲುತ್ತಲೇ ಬಂದಿರುವುದನ್ನು ನಾವು ನೋಡಬಹುದು. ಒಂದು ಮಾನಸಿಕ ದಾಸ್ಯ, ಎರಡನೆಯದು ಆರ್ಥಿಕ ದಾಸ್ಯ. ಮಾನಸಿಕ ದಾಸ್ಯವಿದ್ದದ್ದರಿಂದ ವಿಚಾರ ಸ್ವಾತಂತ್ರ್ಯವಾಗಲೀ, ರಾಜಕೀಯ ಸ್ವಾತಂತ್ರ್ಯವಾಗಲೀ ಆಕೆಗೆ ದೊರೆಯಲಿಲ್ಲ. ಆರ್ಥಿಕ ದಾಸ್ಯವಿದ್ದದ್ದರಿಂದ ಎರಡನೆಯ ದರ್ಜೆಯ ಪ್ರಜೆಯಾಗಿಯೇ ಉಳಿದ ಮಹಿಳೆ ಬಂಡಾಯದ ದನಿ ಎತ್ತುವುದು ಇಲ್ಲಿಯವರೆಗೂ ಸಾಧ್ಯವಾಗಲಿಲ್ಲ.

ಇಂಥ ಹಿನ್ನೆಲೆಯಲ್ಲಿ ಕನ್ನಡ ಲೇಖಕಿಯರ ಲೇಖನಿಯೀಗ ಹರಿತವಾಗಬೇಕಾಗಿದೆ. "ಖಡ್ಗವಾಗಲಿ ಕಾವ್ಯ ಜನರ ಪ್ರಾಣಮಿತ್ರ" ಎಂಬ ಬಂಡಾಯ ಸಾಹಿತ್ಯದ ಉಕ್ತಿಯನ್ನೀಗ ಸಮರ್ಥಗೊಸಲು ಕನ್ನಡ ಲೇಖಕಿಯರು ಪಣತೊಡಬೇಕಾಗಿದೆ. ಸ್ಪೇನ್ ದೇಶದ ಸರ್ವಾಧಿಕಾರಕ್ಕೆ ರೋಸಿದ ಕವಿ ಪಾಬ್ಲೊ ನೆರೂದ ತನ್ನ ಕಾವ್ಯದಲ್ಲಿ

ನಾನ್ಯಾಕೆ ಮಾತಾಡುವುದಿಲ್ಲ
ಬಯಕೆಗಳ ಬಗ್ಗೆ
ಎಲೆಗಳ ಬಗ್ಗೆ
ನನ್ನ ನಾಡಿನ ಮಹಾ ಅಗ್ನಿಪರ್ವತಗಳ ಬಗ್ಗೆ
ಎಂದು ನೀವು ಕೇಳುತ್ತೀರಿ
ಆದರೆ ಹ್ಯಾಗೆ ಮಾತಾಡಲಿ?
ನೋಡಿ ಬೀದಿಯ ಮೇಲೆ ರಕ್ತವಿದೆ.

ಎನ್ನುತ್ತಾನೆ. ನಮ್ಮ ದೇಶದಲ್ಲೂ ಅಂತಹುದೇ ಪರಿ

ಸ್ಥಿತಿ ಇದೆ. ಹರಿಜನರ ಕಗ್ಗೊಲೆ ಈಗಲೂ ನಡೆಯುತ್ತಿದೆ. ಬಡವರು ಅರೆಹೊಟ್ಟೆ, ಬರಿಹೊಟ್ಟೆಯಲ್ಲಿದ್ದಾರೆ. ದಲಿತರ, ಹೆಂಗಸರ ಮೇಲೆ ಅತ್ಯಾಚಾರ ನಡೆಯುತ್ತಿದೆ. ಆದರೂ ನಾವು ಈ ಅಸಮಾನತೆಯನ್ನು ಸಹಿಸುತ್ತಿದ್ದೇವೆ! ಏಕೆ? ನಾವೇಕೆ ಬಂಡಾಯವೇಳುತ್ತಿಲ್ಲ?

ಬಂಗಾಳದ ಲೇಖಕಿ ಶ್ರೀಮತಿ ಆಶಾಪೂರ್ಣ ದೇವಿ ಒಂದೆಡೆ ಹೇಳಿದ್ದಾರೆ. "ಸಮಾಜದ ಕಟ್ಟುಪಾಡುಗಳು, ಮೂಢನಂಬಿಕೆಗಳು ಅರ್ಥವಿಲ್ಲದ ಪರಂಪರೆ, ಹೆಣ್ಣಿಗೆ ಗಂಡಿನಿಂದ, ಸಮಾಜದಿಂದ ಮತ್ತು ಹೆಂಗಸರಿಂದಲೇ ಆಗುತ್ತಿರುವ ಅಪಮಾನಗಳನ್ನು ಪ್ರತಿಭಟಿಸಬೇಕು". ಖ್ಯಾತ ಲೇಖಕಿ ಶ್ರೀಮತಿ ಡಾ॥ ಅನುಪಮಾ ನಿರಂಜನ ಅವರ ಮಾತುಗಳಲ್ಲೇ ಹೇಳುವುದಾದರೆ, "ಕನ್ನಡದ ಲೇಖಕಿಯರು ಸ್ಫೂರ್ತಿ ಪಡೆಯಬೇಕಾದ ಕಾಲವೀಗ ಸನ್ನಿಹಿತವಾಗುತ್ತಿದೆ. ಮಹಿಳಾ ಸಾಹಿತ್ಯದಲ್ಲಿ ಜಡತ್ವ ತುಂಬಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಹೊಸ ಚಿಗುರು ಮೂಡಬೇಕಾದರೆ ಬಂಡಾಯಧ್ವನಿ ಇಲ್ಲೂ ಅಗತ್ಯ".

ಬಂಡಾಯದ ಧೋರಣೆಯ ಕೊಳೆತ ವ್ಯವಸ್ಥೆಯನ್ನು ತಿರಸ್ಕರಿಸುವುದಾಗಿರುತ್ತದೆ. ಬಹು ಜನ ಸಮುದಾಯದ ಹಿತವನ್ನು ಬಯಸುವುದಾಗಿರುತ್ತದೆ. ವ್ಯಕ್ತಿ ಯಾವುದೇ ವರ್ಗದಲ್ಲಿದ್ದರೂ ಜನಪರ ನಿಲುವುಗಳನ್ನು ತಳೆಯಲು ಮನೋದಾರ್ಢ್ಯ ಬೇಕಾಗುವುದು. ನಮ್ಮ ಸಮಾಜದಲ್ಲಿ ಹೆಣ್ಣಿನ ದಾಸ್ಯವನ್ನು ಪೋಷಿಸುವಂಥ ನೂರಾರು ಮೂಢ ನಂಬಿಕೆಗಳಿವೆ. ಪ್ರತಿಯೊಂದನ್ನೂ ವೈಚಾರಿಕವಾಗಿ, ವೈಜ್ಞಾನಿಕ ದೃಷ್ಟಿಕೋನದಿಂದ ನೋಡಿ, ನಿರ್ಧಾರಗಳನ್ನು ತೆಗೆದುಕೊಳ್ಳುವ ಧೈರ್ಯ ಮಹಿಳೆಗೆ ಒರಬೇಕು. ಮಹಿಳೆಯ ಹೋರಾಟವು ಪುರುಷನ ವಿರುದ್ಧ ಅಲ್ಲ. ಸ್ತ್ರೀ ಪುರುಷರ ನಡುವೆ ಅಸಮಾನತೆಯನ್ನು ಸೃಷ್ಟಿಸಿದ - ನಮ್ಮ ಸಮಾಜದ ವ್ಯವಸ್ಥೆಯ ವಿರುದ್ಧ ಈ ಹೋರಾಟ.

ನಿಷ್ಠುರ ಸತ್ಯ, ಜೀವನದ ಸ್ಥೈಜ ಹಾಗೂ ಜಟಿಲ ಸಮಸ್ಯೆಗಳನ್ನು ವಿಶ್ಲೇಷಣ ಮಾಡಿ ಅವುಗಳಿಗೊಂದು ರೂಪ ಕೊಡುವ ಪ್ರಯತ್ನ ಇಂದಿನ ಲೇಖಕಿಯರು ಮಾಡಬೇಕಾಗಿದೆ. ಇದಕ್ಕೆ ವಾಸ್ತವಿಕ, ಸಮಕಾಲೀನ ಪ್ರಜ್ಞೆಯೂ ಇರಬೇಕು. ಅಲ್ಲದೇ ಲೇಖಕಿಯರು ಚಿತ್ರಿಸುತ್ತಿರುವ ಹೆಂಗಸಿನ ಚಿತ್ರಣ ಹಾಗೂ ಮಾನಸಿಕ ದಾಸ್ಯ, ಕಷ್ಟ, ಇದನ್ನೇ ಹೆಚ್ಚು ಚಿತ್ರಿಸುವುದಕ್ಕಿಂತ ಮಹಿಳಾ ಮನೋಧೃಢತೆಯನ್ನು ಹೆಚ್ಚಿಸುವಂತಹ ಕೃತಿಗಳ ರಚನೆಗೆ ಮನಸ್ಸು ಹರಿಗೊಡಬೇಕು.

ಈ ನಿಟ್ಟಿನಲ್ಲಿ ಲೇಖಕಿಯರು ಹೊಸ ಹೊಸ ಅಭಿವ್ಯಕ್ತಿ ಮಾಧ್ಯಮಗಳನ್ನು ಹುಡುಕಿಕೊಳ್ಳಬೇಕಾಗಿದೆ. ಜನಸಾಮಾನ್ಯರಿಗೆ ತಲುಪುವಂತಹದ್ದು, ಹೊಸ ವಸ್ತುಗಳು ಬರವಣಿಗೆಗೆ ಮೂಲದ್ರವ್ಯವಾಗಬೇಕು. ಸಮಾಜದ ದೀನದಲಿತರು, ಹಳ್ಳಿಜನರು, ಕೊಂಪೆಜನರು, ನಿರ್ಗತಿಕರು, ಅಸಹಾಯಕರು, ಮಹಿಳೆಯರು ಮುಂತಾದ ವಾಸ್ತವತೆಯ ಗಟ್ಟಿನೆಲದ ಮೇಲೆ ರಚಿತವಾಗುವ, ಕಲಾತ್ಮಕ ಕೃತಿಗಳನ್ನು ರಚಿಸಿ, ಲೇಖಕಿಯರ ಕೃತಿ ಕಳಪೆ, ವೈಚಾರಿಕತೆಯ ಅಭಾವವಿದೆ ಎನ್ನುವ ಅಪವಾದದಿಂದ ದೂರಾಗಬಹುದಾಗಿದೆ. ಸಮಾನತೆಯು ಬೊಬ್ಬೆ ಹಾಕಿದರೆ ಸಿಗುವಂಥಹದ್ದಾಗಲೀ ಆಮಂತ್ರಿಸಿ ಪಡೆಯುವಂತಹದ್ದಾಗಲೀ ಅಲ್ಲ. ಬೌದ್ಧಿಕ ಚಿಂತನೆಯಿಂದ, ಬರಹದಿಂದ, ಸಾಮಾಜಿಕ ವಿಷಮತೆಯನ್ನು ಪ್ರಶ್ನಿಸುವ, ಹೊಸ ಸವಾಲುಗಳನ್ನು ಸ್ವೀಕರಿಸಿ, ಎದುರಿಸುವ, ಗಟ್ಟಿನಿಲುವಿನಿಂದ ಪಡೆಯಲು ಸಾಧ್ಯವಿದೆ. ಈ ಗಟ್ಟಿ ನಿಲುವನ್ನು ಮಹಿಳೆಗೆ ಬಂಡಾಯದ ಧೋರಣೆಯು ಒದಗಿಸುತ್ತದೆ ಎನಿಸುತ್ತದೆ.

**ದುರ್ಗಾಸುಳೆ.**

---

ಸಮಾನ ಕೆಲಸಕ್ಕೆ ಸಮಾನ ವೇತನ

1975 ಸೆಪ್ಟೆಂಬರ್ 26 ರಂದು ಸ್ತ್ರಿ ಪುರುಷರ ವೇತನಗಳಲ್ಲಿರುವ ವ್ಯತ್ಯಾಸಗಳನ್ನು ಅಳಿಸಿ ಹಾಕುವ ಕಾನೂನನ್ನು ರಾಷ್ಟ್ರಪತಿಯವರು ಜಾರಿಗೊಳಿಸಿದರು. ಸಮಾನ ಕೆಲಸಕ್ಕೆ ಸಮಾನ ವೇತನವನ್ನು ಈ ಕಾಯಿದೆ ಬಲಪಡಿಸಿತಲ್ಲದೆ, ಸ್ತ್ರೀಯರೆಂಬ ಕಾರಣಕ್ಕೆ ಪಕ್ಷಪಾತಕ್ಕೆ ಗುರಿಯಾಗುವುದನ್ನು ತಪ್ಪಿಸಿತು. ಸ್ತ್ರೀಯರಿಗೆ ಉದ್ಯೋಗ ಅವಕಾಶಗಳನ್ನು ತೀವ್ರಗೊಳಿಸುವ ಪ್ರಯತ್ನಕ್ಕಾಗಿ ಒಂದು ಸಲಹಾ ಮಂಡಳಿಯನ್ನು ರಚಿಸಲಾಯಿತು. ಸ್ತ್ರೀ ಪುರುಷರ ಮಧ್ಯ ಇರುವ ಪಕ್ಷಪಾತವನ್ನು ತೊಡೆದು ಹಾಕಲು ಈ ಕಾಯಿದೆ ತನ್ನ ಎಲ್ಲಾ ಮಿತಿಗಳ ನಡುವೆಯೂ ಒಂದು ಮೈಲಿಗಲ್ಲಾಯಿತು.

# ಬದುಕೊಂದು ಕನ್ನಡಿ

ನಮ್ಮ ಸಾಮಾಜಿಕ ನಿತ್ಯ ಬದುಕಿನ ಪ್ರತಿಗತಿಯಲ್ಲಿ ಮಹಿಳೆಗಾಗಿ ಸಿದ್ಧ ಪಾತ್ರಗಳು ರೂಢಿಗತವಾಗಿ ಬೇರುಬಿಟ್ಟಿವೆ. ಅವು ಆಕೆಯನ್ನು ಕಾಡಿವೆ, ಕಾಡುತ್ತಿವೆ, ಹಿಂಸಿಸುತ್ತಿವೆ. ಹೆಣ್ತನದ ಚಿಪ್ಪೊಳಗೆ ಆಕೆಯ ಎಲ್ಲಾ ಸುಖ, ದುಃಖ, ನೋವು, ನಲಿವುಗಳು ಅಡರಿಕೊಂಡಿವೆ. ಹಾಗೆ ನೋಡುತ್ತಾ ಹೋದರೆ ನಮ್ಮ ಇತಿಹಾಸದಲ್ಲಿಯೂ ಕೂಡ ಎಲ್ಲಿಯೂ ಆಕೆಯ ಸಾಮಾನ್ಯ ಅನುಭವಗಳ ಅಭಿವ್ಯಕ್ತಿ ನಿರೂಪಣೆಯೇ ಇಲ್ಲ. ಎಲ್ಲಾ ಆಡಂಬರದ ಅಲಂಕಾರಗಳ ಮರೆಯಲ್ಲಿ ಅವಳ ಜೀವಿತದ ಮಜಲುಗಳನ್ನು ಮುಚ್ಚಿಡಲಾಗಿದೆ. ಒಬ್ಬ ಪ್ರಜ್ಞಾವಂತ ಹೆಣ್ಣು ತನ್ನ ಅನುಭವಗಳ ವಿಶಿಷ್ಟತೆಯಲ್ಲಿ, ಕಲಾವಂತಿಕೆಯಲ್ಲಿ ತನ್ನತನವನ್ನು ಅಭಿವ್ಯಕ್ತಿಗೊಳಿಸುತ್ತಾ ಹೋಗುವಾಗ ಆಕೆ ತನ್ನ ನಿತ್ಯ ಕಾಯಕದಲ್ಲಿ ಎದುರಿಸಲೇಬೇಕಾಗಿ ಬರುವ ಸಾಮಾನ್ಯ ಸಂದಿಗ್ಧತೆಗಳನ್ನು ನಾನು ಕಂಡಂತೆ (ಕೇಳಿ ತಿಳಿದುಕೊಂಡಂತೆ) ನಿಮ್ಮ ಮುಂದೆ ಬಿಚ್ಚಿಡುತ್ತಾ ಹೋಗುತ್ತೇನೆ. ಸಂದರ್ಭಗಳ ಸತ್ಯಾ–ಸತ್ಯತೆಗಳನ್ನು ಮನಗಾಣುವುದು ನಿಮ್ಮ ಆಲೋಚನೆಗೆ ಬಿಟ್ಟದ್ದು. ಆದರೂ ನನ್ನದೊಂದು ವಿನಂತಿ. ಈ ಆಲೋಚನೆಗಳಲ್ಲಿ, ಈ ಸಂದರ್ಭಗಳಲ್ಲಿ ನಿಮ್ಮನ್ನೇ ನೀವು ಒಂದು ಕ್ಷಣ ತೊಡಗಿಸಿಕೊಳ್ಳಿ; ಅಷ್ಟೆ. ನಿಮಗೇನೆನಿಸಬಹುದೋ ಅಷ್ಟನ್ನೂ ಪ್ರಾಮಾಣಿಕತೆಯಿಂದ ಒಪ್ಪಿಕೊಳ್ಳಿ. ಅಷ್ಟೆ.........!

ಸಾಮಾನ್ಯ ಸಂಗತಿಗಳೇ ಇವು. ಆದರೂ ವೇದನೆಯೊಂದು ಸಂವೇದನೆಯ ಮಟ್ಟದಲ್ಲಿ ತೆರೆದುಕೊಳ್ಳುವಾಗ ಅದಕ್ಕೆ ಸಂಬಂಧಪಟ್ಟ ವ್ಯಕ್ತಿ ವಿಶೇಷವೆನಿಸುತ್ತಾನೆ. ಹಾಗೆಯೆ ಸಂದರ್ಭ ಕೂಡ.

ಬಸ್ಸಿನಲ್ಲಿ ಒಬ್ಬರೇ ಪ್ರಯಾಣಿಸುತ್ತಿದ್ದೀರೆಂದು ತಿಳಿದುಕೊಳ್ಳಿ. ಸರಿ, ಪಕ್ಕದ ಸೀಟಗೆ ಪುರುಷನೊಬ್ಬ ಬಂದು ಕೂಡುತ್ತಾನೆ. ಸುಮ್ಮನೆ ಕೂಡುತ್ತಾನೆಯೇ–! (ಎಲ್ಲ ಪುರುಷರೂ ಹಾಗಂತ ಅಲ್ಲ) ಬೇಕೆಂತಲೇ ಮೈ–ಮೈ ತಾಗಿಸುತ್ತಾ ಕಡೆಗೆ ಬೇಕೆಂತಲೇ ಸಿಗರೇಟು ಎಳೆಯುತ್ತಾ ಕೂರುತ್ತಾನೆ. ಸರಿ, ಆಗ ನೀವೇನು ಮಾಡುವಿರಿ?

ಮೆತ್ತಗಿನ ಸ್ವಭಾವದವರಾಗಿದ್ದರೆ ಮುಖವನ್ನು ಸಿಂಡರಿಸಿಕೊಳ್ಳುತ್ತಾ ಮತ್ತಷ್ಟು ಮುದುರಿ ಕೂರಬಹುದು. ಸ್ವಲ್ಪ ಧೈರ್ಯಶಾಲಿಗಳಾಗಿದ್ದಲ್ಲಿ ಆತನಿಗೆ ಸಿಗರೇಟ್ ಸೇದಬೇಡವೆಂದು ಕೇಳಿಕೊಳ್ಳಬಹುದು. ಆದಕ್ಕೂ ಆತ ಜಗ್ಗದಿದ್ದಲ್ಲಿ "ನಾನ್‌ಸೆನ್ಸ್..." ಎಂದು ಸಿಡುಕುತ್ತಾ ಕೂತಲ್ಲಿಂದ ಎದ್ದು ಬೇರೆ ಸೀಟಿಗೆ (ಸೀಟಿದ್ದರೆ....) ಎದ್ದು ಹೋಗಬಹುದು. ಅದೇ ಹೋರಾಟ, ಮನೋಭಾವನೆಯ ಗಟ್ಟಿ ಹೆಣ್ಣೊಂದು ಅದೇ ಜಾಗದಲ್ಲಿ ಕೂತಿದ್ದ ಪಕ್ಷದಲ್ಲಿ ಏನಾಗುತ್ತಿತ್ತು ಎನ್ನುವುದಕ್ಕಿಂತ ಏನು ಮಾಡಿದಳು ಎನ್ನುವುದು ಇಲ್ಲಿ ವಿಶೇಷವೆನ್ನಿಸಿದೆ ನಂಗೆ.

ನನ್ನ ಗೆಳತಿಯೊಬ್ಬಳು ತುಂಬಾ ದಿಟ್ಟ ಸ್ವಭಾವದ ಹುಡುಗಿ. ಒಮ್ಮೆ ಹೀಗೆ ಒಂಟಿಯಾಗಿ ಪ್ರಯಾಣಿಸುತ್ತಿದ್ದಾಗ ಪಕ್ಕದಲ್ಲಿ ಕೂತು ಮಂಗಚೇಷ್ಟೆ ಮಾಡುತ್ತಾ ಸಿಗರೇಟು ಎಳೆಯುತ್ತಿದ್ದವನ ಸಿಗರೇಟಿಗೇ ಕೈಹಾಕಿ ಉರಿಯುತ್ತಿದ್ದ ಸಿಗರೇಟನ್ನು ನಂದಿಸಿ ಕಿಟಕಿಯಿಂದ ಆಚೆಗೆಸೆದುಬಿಟ್ಟಳು. ಮತ್ತೆ ಏನೂ ನಡೆದೇ ಇಲ್ಲವೇನೋ ಎನ್ನುವಂತೆ ಕೈಲಿದ್ದ ಮ್ಯಾಗಜೀನನ್ನು ಓದುತ್ತಾ ಕೂತುಬಿಟ್ಟಳು. ಬಸ್ಸಿನಲ್ಲಿ ಆಮೇಲೆ ನಡೆದುಹೋದ ಘಟನೆಗಳೆಲ್ಲಾ ಇಲ್ಲ ಅಪ್ರಸ್ತುತ. ಆದರೆ ಏನೊಂದೂ ಮಾತಿಲ್ಲದೆ ಕೇವಲ ಕ್ರಿಯೆಯಲ್ಲಿ ತನ್ನ ಅಸಮಾಧಾನವನ್ನು, ವಿರೋಧವನ್ನು ವ್ಯಕ್ತಪಡಿಸಿದ ಗೆಳತಿಯ ನಡವಳಿಕೆಯ ಬಗ್ಗೆ ನನಗೆ ಈಗಲೂ ಒಂದು ಥರದ ಅಭಿಮಾನ.

ಇನ್ನೊಂದು ಪರಿಸ್ಥಿತಿಯನ್ನು ಹೇಳುತ್ತೇನೆ. ಸಂದರ್ಭ, ವ್ಯಕ್ತಿ, ಪರಿಸರ ಎಲ್ಲವೂ ಬೇರೆ,

ಆ ವಠಾರಕ್ಕೆಲ್ಲಾ ಆಕೆಯೊಬ್ಬ ಗಟ್ಟಿಗಿತ್ತಿ ಹೆಂಗಸೆಂದೇ ಹೆಸರು ಪಡೆದಿದ್ದವರು. ಆಗದವರು ಆಕೆಯನ್ನು ಹಿಂದಿನಿಂದ ಜಗಳಗಂಟಿ, ಗಯ್ಯಾಳಿ ಹೆಣ್ಣೊಂದು ಟೀಕಿಸಿ ನಗುತ್ತಿದ್ದರು. ಒಮ್ಮೆ ಅವರ ಸಂಬಂಧಿಕರ ಮದುವೆಗಾಗಿ ಆಕೆ ಹಾಗು ಆಕೆಯ ಸಂಸಾರ ಊರಿಗೆಂದು ಹೋದವರು, ಹೋದ ದಿನವೇ ಮದುಮಗಳ ಸಮೇತವಾಗಿ ವಾಪಾಸಾಗಿ ಬಿಟ್ಟರು. ಕೇರಿ ಬಾಗಿಲ ಜನರೆಲ್ಲಾ ಕುತೂಹಲದಿಂದ ವಿಷಯವೇನೆಂದು ತಿಳಿಯಲು ಹೋದಾಗ ಆ ಹೆಂಗಸು ಬಾಯ್ತುಂಬಾ ನಗುತ್ತಾ "ಹೌದ್ರೀ...., ನಾವೆಲ್ಲಾ ಮದುವೇಗಂತ್ಲೇ

ಹೋದದ್ದು. ಆದ್ರೆ ಆ ಗಂಡಿನ ಕಡೆಯವರು ಇರುವ ಈ ಒಬ್ಬಳೇ ಮಗಳಿಗೆ ಮನೆತನದ ಆಸ್ತಿಯೆಲ್ಲಾ ಬರೆದು ಕೊಟ್ರೆ ಮಾತ್ರ ತಾಳಿ ಕಟ್ತೇವೀಂತ ಕಡೇ ಗಳಿಗೆಯಲ್ಲಿ ಜಗಳಕ್ಕೆ ನಿಂತ್ರು...."

"ನಂಗೆ ಈ ಅನ್ಯಾಯ ನೋಡಿ ಸಹಿಸೋಕಾಗ್ಲಿಲ್ಲ. ಗಂಡಿನವರ ಜೊತೆ ಜಗಳ ಕಾದೆ. ಆ ಜನ ತಗ್ಲಿಲ್ಲ. ಕಡೆಗೆ ಆ ಮದುಮಗನ ಎದುರಿಗೇ, ಆ ಲೋಫರ್ ತಾಳಿ ಕಟ್ತೇನಿ ಅಂದ್ರೂ ನೀ ಕಟ್ಟಿಸ್ಕೋಬೇಡ್ವೆ........ ಅಂತ ಮದ್ವೆ ಹುಡ್ಗಿಗೆ ಬುದ್ಧಿ ಹೇಳಿ ನನ್ನ ದೊಡ್ಡ ಮಗನಿಗೇ ಈ ಹುಡ್ಗೀನ ತಂದ್ಕೋತೀನೀಂತ ಮಾತುಕೊಟ್ಟು ಹುಡ್ಗೀನ್ನ ನನ್ನ ಜೊತೆಗೇ ಕರೆದ್ಕೊಂಡು ಬಂದೆ. ನೋಡ್ರೀ........ ಇದೇ ಆ ಹುಡ್ಗಿ........! ನನ್ನ ಸೊಸೆ ಚೆಂದಾಗಿದ್ದಾಳೆ. ನಮಗಷ್ಟೇ ಸಾಕು. ನಾವೇನೂ ಆಶೆಬುರುಕ ಜನರಲ್ಲ............!"

ಅಂತ ಬಾಯ್ತುಂಬಾ ಹೇಳುತ್ತ ಬಂದ ಜನರಿಗೆಲ್ಲಾ ಸಕ್ಕರೆ ಹಂಚಿದರು. ಹೆಣ್ಣಿನ ಗಟ್ಟಿತನ, ಗೈಯ್ಯಾಳಿತನ ಜಗಳಗಂಟಿತನ ಇವುಗಳೆಲ್ಲಾ ಪರಿಸ್ಥಿತಿಯನ್ನು ಮೀರಿ ಒಂದು ದಿಟ್ಟ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಎಷ್ಟೊಂದು ಪೂರಕವಾಗಿ ವರ್ತಿಸುತ್ತವೆ ನೋಡಿ. ಪರಿಸ್ಥಿತಿಯನ್ನು ಪ್ರಾಮಾಣಿಕವಾಗಿ ಬಗೆಹರಿಸಲು ಬಡಿದಾಡುವ; ಅಕಸ್ಮಾತ್ ಕಾಲ ಬಂದರೆ ಅದನ್ನು ತಮ್ಮ ಹೆಗಲ ಮೇಲೆ ಹೊತ್ತಿಕೊಳ್ಳುವ ಜವಾಬ್ದಾರಿಯ ಗಟ್ಟಿತನ ಎಷ್ಟು ಜನ ಹೆಣ್ಣುಮಕ್ಕಳಲ್ಲಿದೆ............? ಗಟ್ಟಿತನದಲ್ಲಿ ನ್ಯಾಯ— ನಿಷ್ಠೂರತೆಗಳು ಬೆರೆತಾಗಲಲ್ಲವೇ ಅದಕ್ಕೊಂದು ಸೊಗಡು ಕೂಡಿಕೊಳ್ಳುವುದು............!

ಅಂತೆಯೇ ಇದು ಮತ್ತೊಂದು ರೀತಿಯದು. ಆರ್ಥಿಕವಾಗಿ ಸ್ವಾವಲಂಬಿಯಾಗಿ; ತನ್ನ ಸ್ಥಾನ–ಮಾನದ ಇತಿಮಿತಿಯನ್ನು ಅರ್ಥಮಾಡಿಕೊಂಡಿದ್ದ ವೈಚಾರಿಕ ಪ್ರಜ್ಞೆಯುಳ್ಳ ಮಹಿಳೆಯೊಬ್ಬಳ ದೃಷ್ಟಾಂತ:

ಆಕೆ ಪ್ರೈವೇಟ್ ಫರ್ಮ್ ಒಂದರಲ್ಲಿ ಕೆಲಸಕ್ಕಿದ್ದು ಬಹಳ ವರ್ಷವಾಯಿತು. ಸಹೋದ್ಯೋಗಿಗಳು ಅವರನ್ನು ಗೌರವದಿಂದಲೇ ಕಾಣುತ್ತಿದ್ದರಾದರೂ, ಹೆಣ್ಣಿನ ಸಮಾನತೆಯ ಬಗ್ಗೆ ಮಾತುಗಳು ಬಂದಾಗ ಮಾತ್ರ ಅವರೆಲ್ಲಾ ಸೇರಿಕೊಂಡು, "ಏನ್ರೀ ಮೇಡಂ...., ಸಮಾನತೆ ಸಮಾನತೆ ಅಂತ ಕೂಗಾಡ್ತೀರಾ, ಆದರೆ ಹೆಂಗಸರಿಗಾಗಿ ಇರುವ ಸವಲತ್ತುಗಳನ್ನು ಮಾತ್ರ ಹಿಂಜರಿಕೆ ಇಲ್ಲದೆ, ಎರಡು ಮಾತಿಲ್ಲದೆ ಬಳಸಿಕೊಂಡು ಬಿಡುತ್ತೀರಲ್ಲ ಇದು ಅಪಚಾರವಲ್ಲವೆ?"

ಅಂತ ಆಗಾಗ ಹಂಗಿಸಿ ಮಾತನಾಡುತ್ತಿದ್ದರಂತೆ, ಸರಿ, ಇವರೂ ಕೇಳುವಷ್ಟು ದಿನ ಕೇಳಿ ನಂತರ ಬಹಳಷ್ಟು ಆಲೋಚನೆ ಮಾಡಿ; ತಮ್ಮ ಆಫೀಸಿನಲ್ಲಿ ಒಂದು ಚಿಕ್ಕ ಪ್ರಯೋಗ ಮಾಡಿ ಆ ಮೂಲಕ ಅವರ ಸಹೋದ್ಯೋಗಿಗಳ ಮನೋಭಾವನೆಯನ್ನೇ ಬದಲಾಯಿಸಿ ಬಿಟ್ಟರಂತೆ.

ಅವರು ಮಾಡಿದ್ದು ಇಷ್ಟೆ. ಆಫೀಸಿನಲ್ಲಿ ಬಳಕೆಗಾಗಿ ಇಟ್ಟಿದ್ದ ಆಷ್‌ಟ್ರೇಯನ್ನು ಯಾರಿಗೂ ಗೊತ್ತಾಗದಂತೆ ಒಂದು ದಿನ ತೆಗೆದು ಬಚ್ಚಿಟ್ಟರಂತೆ. ಸೇದುವ ಚಟವಿದ್ದ ಸಹೋದ್ಯೋಗಿಗಳು ಆಷ್‌ಟ್ರೇಗಾಗಿ ಗೊಣಗಾಡುತ್ತಾ ಹುಡುಕಾಟ ನಡೆಸಿದ್ದರಂತೆ. ಮಾರನೆಯ ದಿನವೂ ಅದು ಸಿಕ್ಕದಿದ್ದಾಗ ತಕ್ಷಣವೇ ಹೊಸತನ್ನು ತರಿಸಿಕೊಂಡರಂತೆ. ಆಗ ಮಾತ್ರ ಇವರು ಎಲ್ಲರಿಗೂ ಕಾಣಿಸುವಂತೆ ಅದುವರೆಗೂ ಬಚ್ಚಿಟ್ಟಿದ್ದ ಆಷ್‌ಟ್ರೇಯನ್ನು ತಂದು ಅದು ಎಲ್ಲಿತ್ತೋ ಅಲ್ಲಿಯೇ ಇಟ್ಟುಬಿಟ್ಟರಂತೆ. ಅವರ ಸಹೋದ್ಯೋಗಿಗಳು ಚಕಿತರಾಗಿ ಹುಬ್ಬು ಮೇಲೇರಿಸಿಕೊಂಡು "ಆಷ್‌ಟ್ರೇ ನಿಮಗ್ಯಾಕ್ರೀ ಬೇಕಿತ್ತು....? ಅಂತ ಪ್ರಶ್ನಿಸಿದಾಗ ಇವರು ಮುಗುಳ್ನಗುತಾ—

"ಅಲ್ರೀ....ನಿಮಗೆ ಸಮಯ ಸಿಕ್ಕಾಗೆಲ್ಲಾ ಹೆಣ್ಣಿಗಿರುವ ಸವಲತ್ತುಗಳ ಬಗ್ಗೆ ಟೀಕಿಸುತ್ತೀರಿ. ಅದನ್ನು ಮನದಟ್ಟು ಮಾಡಿಕೊಡಲೆಂದೇ ನಿಮ್ಮ ಮೇಲೆ ಒಂದು ಚಿಕ್ಕ ಪ್ರಯೋಗ ನಡೆಸಿದೆ ಅಷ್ಟೆ. ಅವಶ್ಯಕತೆ ಇದ್ದಾಗ ಸವಲತ್ತುಗಳನ್ನು ಪ್ರತಿಯೊಬ್ಬರೂ ಅಪೇಕ್ಷಿಸುತ್ತಾರೆ. ಅರ್ಥವಾಯಿತಲ್ಲ....? ಅವರನ್ನೇ ಮರುಪ್ರಶ್ನಿಸಿದರಂತೆ.

ದಡ್ಡರಿಗೆ ದೊಣ್ಣೆಯ ಹೊಡೆತವಾದರೆ ಬುದ್ಧಿವಂತರಿಗೆ ಮಾತಿನ ಹೊಡೆತ ಸಾಕಲ್ಲವೆ....? ಇಂತಹ ವಿಶೇಷವೆನ್ನಿಸುವ ಬಹಳಷ್ಟು ದೃಷ್ಟಾಂತಗಳು ಇತ್ತೀಚೆಗೆ ಕಂಡುಬರುತ್ತಿರುವುದು ನಿಜವಾದರೂ; ಹೆಣ್ಣು ತಾನೇ ನಿರ್ಮಿಸಿಕೊಂಡ ಅತಿಭಾವುಕತೆಯ ಪರದೆಯಿಂದ ಈಚೆ ಬರಬೇಕಾಗಿದೆ. ಪುರುಷರೊಂದಿಗೆ ಸಹಕರಿಸಿ ಬೆರೆತು ಅವರ ಬೆಂಬಲವನ್ನು ಪಡೆಯಬೇಕಾಗಿದೆ. ರೂಢಿಗತ ವ್ಯವಸ್ಥೆಯನ್ನು ಧಿಕ್ಕರಿಸುತ್ತಾ ಬಳ

ಗೊಳಗೇ ಆದಕ್ಕೇ ಜೋತುಬೀಳುವ, ಸಮರ್ಥಿಸುವ ಸ್ತ್ರೀಯರ ಮನೋಭಾವನೆ ಬದಲಾಗದ ತನಕ ಆಕೆಯು ಯಾವುದೇ ಹೆಣ್ಣಿನ ನೊಂದ ಸ್ಥಿತಿಗೆ, ದಯನೀಯ ಪರಿಸ್ಥಿತಿಗಳಿಗೆ ಪ್ರಾಮಾಣಿಕವಾಗಿ ಸ್ಪಂದಿಸಲಾರಳು. ವೇದನೆ - ಕಾತುರಗಳನ್ನು ಅರಿಯಲಾರಳು.

ನಿಜವಾದ ಅರ್ಥದಲ್ಲಿ ಹೆಣ್ಣಿನ ಸಂವೇದನೆಗಳಿಗೆ, ತನ್ನ ಸೀಮಿತ ಕಟ್ಟೆ ಪಂಚಾಯಿತ್ತಿಯಲ್ಲಿ ಅರ್ಥ-ವಿಸ್ತಾರತೆಯನ್ನು ಕೊಡುವುದಕ್ಕಿಂತ ಬಹುಮುಖ್ಯವಾಗಿ ಸಮಸ್ಯೆಗಳ ವೇದನೆಗಳ ಹಿಂದಿರುವ ಕ್ರೂರ ಸತ್ಯವನ್ನು ಹೆಣ್ಣು ಮನಗಾಣಬೇಕಾಗಿದೆ. ಅಭಿವ್ಯಕ್ತಿಸುವುದು-ವಿರೋಧಿಸುವುದು, ನಂತರದ ಮಜಲುಗಳು. ಯಾವುದಕ್ಕೂ ಪ್ರಾಮಾಣಿಕ ಹೋರಾಟವೇ ಮುಖ್ಯತಾನೆ?

**ನಿರ್ಮಲಾ, ಆನವಟ್ಟಿ**

---

## ಹೈಕೋರ್ಟ್‌ನಲ್ಲಿ ಮನು ವಿಗ್ರಹ!

ರಾಜಸ್ಥಾನದ ಜೈಪುರ ಹೈಕೋರ್ಟಿನ ಮುಂದೆ 'ಮನು' ವಿನ ವಿಗ್ರಹ ಸ್ಥಾಪನೆಯಿಂದಾಗಿ ದೇಶಾದ್ಯಂತ ಪ್ರತಿಭಟನೆಗಳಿಗೆ ಕಾರಣವಾಗಿದೆ. ಪ್ರಸ್ತುತ ಹಿಮಾಚಲ ಪ್ರದೇಶದಲ್ಲಿ ಮುಖ್ಯ ನ್ಯಾಯಾಧೀಶರಾಗಿರುವ ಆಗಿನ ಜೈಪುರದ ಮುಖ್ಯ ನ್ಯಾಯಾಧೀಶ 'ನರೇಂದರ್ ಕಲ್ಸಿವಾಲ್' ಇವರು ಈ ವಿಗ್ರಹ ಸ್ಥಾಪನೆಗೆ ಅನುಮತಿ ನೀಡಿರುವುದಾಗಿ ತಿಳಿದು ಬಂದಿದೆ. ಕಾಂಗ್ರೆಸ್ ಪಕ್ಷದ ಸದಸ್ಯ 'ಕಲ್ಲಾ' ಮತ್ತು 'ಲಯನ್ಸ್ ಕ್ಲಬ್' ಇವರ ಆರ್ಥಿಕ ಸಹಕಾರದಿಂದ ರಚಿಸಲಾದ ಈ ವಿಗ್ರಹವನ್ನು 'ಮ್ಯಾಜಿಸ್ಟ್ರೇಟ್' ಪಿ. ಕೆ. ಜೈನ್ ಇವರು ಪ್ರತಿಷ್ಠಾಪಿಸಿರುವುದಾಗಿಯೂ ತಿಳಿದು ಬಂದಿದೆ.

ಪ್ರಸ್ತುತ ಜೈಪುರದಲ್ಲಿರುವ ಹೈಕೋರ್ಟ್ ಮುಖ್ಯ ನ್ಯಾಯಾಧೀಶ 'ಮಿಲಾಪ್ ಚಾಂದ್' ರವರು ಆರಂಭದಲ್ಲಿ ಮನುವಿನ ವಿಗ್ರಹವನ್ನು ತೆಗೆದಿಡಬೇಕೆಂದು ಬಯಸಿದ್ದರೂ ಅನಂತರ ದೇಶಾದ್ಯಂತ ಕಂಡು ಬಂದ ತೀವ್ರ ಪ್ರತಿಭಟನೆಯಿಂದಾಗಿ ವಿಗ್ರಹವನ್ನು ಮುಸುಕಿನಲ್ಲಿಡುವಂತೆ ಸಲಹೆ ಮಾಡಿದರು. ಆದರೆ ರಾತ್ರಿ ಸಮಯದಲ್ಲಿ ಯಾರೋ ವಿಗ್ರಹದ ಮುಸುಕನ್ನು ತೆರೆದು ಸಾರ್ವಜನಿಕರು ನೋಡುವಂತೆ ಮಾಡಿದರು. ಇದರಿಂದಾಗಿ ಜೈಪುರದ ಬಾರ್ ಕೌನ್ಸಿಲ್ ಸದಸ್ಯರು, ಪರಿಶಿಷ್ಟ ಜಾತಿ ಸಂಘಟನೆಗಳು, ವಿಧಾನ ಸಭಾ ಸದಸ್ಯರು ಪ್ರತಿಭಟನಾ ಸಭೆಗಳನ್ನು ಮಾಡಿ ನ್ಯಾಯಾಂಗವನ್ನು ಟೀಕಿಸಿದರು. ದೆಹಲಿ ಹಾಗೂ ಇತರ ಅನೇಕ ಕಡೆಗಳಲ್ಲಿಯೂ ಸಾರ್ವಜನಿಕ ಬಹಿರಂಗ ಸಭೆಗಳನ್ನು ನಡೆಸಿ ಪ್ರಗತಿಪರ ಹಾಗೂ ಪ್ರಜಾಪ್ರಭುತ್ವವಾದಿ ಸಂಘಟನೆಗಳು ತೀವ್ರ ಪ್ರತಿಭಟನೆಯನ್ನು ವ್ಯಕ್ತ ಪಡಿಸಿದವು.

ಇದರಿಂದಾಗಿ ಜುಲೈ 28 ರಂದು ಜೋಧಪುರದಲ್ಲಿ ಸೇರಿದ ಜೈಪುರ ಹೈಕೋರ್ಟ್ ವಿಗ್ರಹವನ್ನು ಕಿತ್ತುಹಾಕುವಂತೆ ಆದೇಶಿಸಿತು. ಆದರೆ ಹಿಂದೂ ಸಂಘಟನೆಗಳು, ಆರ್. ಎಸ್ ಎಸ್, ವಿರಾಟ ಸಮ್ಮೇಳನ, ಹಿಂದೂ ಪರಿಷತ್, ಆರ್ಯ ಸಮಾಜ, ಕಾಂಗ್ರೆಸ್, ಜೈನ ಮತ್ತು ಬನಿಯಾ ಸಮುದಾಯದ ಸಂಘಟನೆಗಳ ಸಹಕಾರದೊಂದಿಗೆ 'ನಾಥದ್ವಾರ' ದಲ್ಲಿ ಅಸ್ಪೃಶ್ಯರು ದೇವಾಲಯ ಪ್ರವೇಶಿಸಬಾರದೆಂದು ಪ್ರತಿಭಟಿಸಿದ 'ದಯಾನಂದ' ಎಂಬುವವರು ಹೈಕೋರ್ಟಿನ ಆದೇಶದ ವಿರುದ್ಧ ತಡೆಯಾಜ್ಞೆಯನ್ನು ತಂದು ವಿಗ್ರಹವನ್ನು ಕಿತ್ತುಹಾಕದಂತೆ ಅಡ್ಡಿಪಡಿಸಿದ್ದಾರೆ. ಇತ್ತೀಚೆಗೆ ನಡೆದ ಸಾರ್ವಜನಿಕ ಸಭೆಯೊಂದರಲ್ಲಿ, ಸುಪ್ರೀಂಕೋರ್ಟಿನ ನಿವೃತ್ತ ನ್ಯಾಯಾಧೀಶ "ಕೃಷ್ಣ ಅಯ್ಯರ್" ರವರು — "ಪ್ರಸ್ತುತ ಭಾರತದಲ್ಲಿ ಮನುವಿಗಾಗಲೀ ಆತನ ಸ್ಮೃತಿಗಾಗಲಿ ಯಾವುದೇ ಅವಕಾಶವಿಲ್ಲ. ಪ್ರಜಾಪ್ರಭುತ್ವ ಹಾಗೂ ಜಾತ್ಯಾತೀತ ಭಾರತದಲ್ಲಿ ಸಂವಿಧಾನವೇ ಸ್ಮೃತಿ ಮತ್ತು ಅದನ್ನು ಎಲ್ಲರೂ ಗೌರವಿಸಬೇಕು ಎಂದು ಹೇಳಿ ತೀವ್ರ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು.

ಮನುವಿನ ವಿಗ್ರಹವನ್ನು ಹೈಕೋರ್ಟ್ ಕಿತ್ತುಹಾಕದಿದ್ದರೆ ಏನೇ ಆದರೂ ಸಮತಾ ಸೈನಿಕ ದಳವು ಅದನ್ನು ಕಿತ್ತುಹಾಕದೆ ಬಿಡುವುದಿಲ್ಲ ಎಂಬುದಾಗಿ ರಾಜಸ್ಥಾನ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಿಗೆ ಒಂದು ಪತ್ರವನ್ನು ಕಳುಹಿಸಿದೆ. ಅದಲ್ಲದೆ ರಾಜಸ್ಥಾನವು ನಾಗರೀಕತೆ ಹಾಗೂ ಬಡತನದ ಅತ್ಯಂತ ಕೆಳಸ್ತರದಲ್ಲಿ ಬಹು ಸಂಖ್ಯಾತ ಜನವರ್ಗ ಬದುಕುವ ತೀವ್ರ ಹಿಂದುಳಿದ ರಾಜ್ಯವಾಗಿದೆ. ಇಲ್ಲಿ ಸತಿ ಪದ್ಧತಿ ಮತ್ತು ಬಾಲ್ಯವಿವಾಹವನ್ನು ವಿದ್ಯಾವಂತ ಹಾಗೂ ವಿಧಾನ ಸಭಾ ಸದಸ್ಯರೇ ಆಚರಿಸಿಕೊಂಡು ಬರುತ್ತಿದ್ದಾರೆ. ನಾಥದ್ವಾರ ಹಾಗೂ ಇತರೆಡೆಗಳಲ್ಲಿ ಪರಿಶಿಷ್ಟ ಜಾತಿಗಳವರಿಗೆ ದೇವಾಲಯ ಪ್ರವೇಶವೇ ಇಲ್ಲವಾಗಿದೆ. ಇಂತಹ ಪರಿಸರವೊಂದರಲ್ಲಿ ಹೈಕೋರ್ಟ್ ನ್ಯಾಯಾಧೀಶರೇ ಕೋಮು ಮತ್ತು ಮೂಲಭೂತವಾದಿ ಸಂಘಟನೆಗಳ ನೇತೃತ್ವ ವಹಿಸುತ್ತಿರುವುದು ಇಡಿಯ ನ್ಯಾಯಾಂಗದ ಘನತೆಗೆ ಮಸಿ ಬಳಿದಂತೆ ಆಗಿದೆ. ಮತ್ತು ನಾಗರೀಕ ಪ್ರಪಂಚದಲ್ಲಿ ಇದು ಅತ್ಯಂತ ಹೇಯ ಕೃತ್ಯವಾಗಿದೆ ಮಾತ್ರವಲ್ಲ ಭಾರತದ ಮಾನವ ಜನಾಂಗವನ್ನು ಶತಮಾನಗಳ ಹಿಂದಕ್ಕೆ ಒಯ್ಯುವ ಅನಾಗರಿಕ ತಂತ್ರವಿದು. ಮಾನವತಾವಾದಿಗಳು ಇದನ್ನು ಖಂಡಿಸಲೇ ಬೇಕಾಗಿದೆ, ಎಂಬುದಾಗಿ ಸಮತಾ ಸೈನಿಕ ದಳವು ತನ್ನ ಹೇಳಿಕೆಯಲ್ಲಿ ಹೇಳಿದೆ.

ಹೌದು ...ಹುಟ್ಟುವಾಗಲೇ ಹಿಂದು, ಮುಸ್ಲಿಂ, ಕ್ರೈಸ್ತರಾಗಿ ಹುಟ್ಟುವ ಭಾರತದಲ್ಲಿ ಮಾನವ ಪ್ರೇಮಿಗಳಿರುವರೇ...? ಇದ್ದರೆ ಅವರೇನು ಮಾಡು[illegible]?

**ಪಿ. [illegible], ಸುಳ್ಯ**

# ಮೌನ ಮಾತಾದಾಗ

**ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗು ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದು ಕಳಿಸಿದ ಲೇಖನಗಳಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.**

**ಸಂ.**

ಗೆಳತಿ ಮಾಧುರಿಯಿಂದ ನನಗೆ ಪತ್ರ ಬಂದಿತ್ತು. ಅವಳ ಭೇಟಿಯಾಗಿ ಬಹಳ ಸಮಯವಾಗಿತ್ತಾದ್ದರಿಂದ ಆತುರದಿಂದ ಪತ್ರ ಬಿಡಿಸಿದೆ. ಪತ್ರ ಓದುತ್ತಿದ್ದಂತೆ ತಲ್ಲಣಗೊಂಡಿದ್ದೆ. ಆ ಪತ್ರ ಗೆಳತಿಯ ಕ್ಷೇಮ ಸಮಾಚಾರದ ಬದಲಿಗೆ ಆಕೆಯ ಸಾವಿನ ಸುದ್ದಿ ಹೊತ್ತು ತಂದಿತ್ತು.

ನನ್ನ ಗೆಳತಿ ಮಾಧುರಿ ಬಡತನದಿಂದ ಬಂದವಳು. ಅವಳ ಅಕ್ಕನಿಗೆ ಮದುವೆಯಾದ ಮೇಲೆ ಇವಳು, ತಂದೆ, ತಾಯಿ ಒಟ್ಟು ಮೂರು ಜನ ಮಾತ್ರವೇ ಇರುವುದು ಮನೆಯಲ್ಲಿ. ಅಪ್ಪನ ಸಂಪಾದನೆ ಏನೇನೂ ಇಲ್ಲ, ಬರುವ ಅಲ್ಪ ಸ್ವಲ್ಪ ಆದಾಯವೂ ಆತನ ಖರ್ಚಿಗೇ ಸರಿಯಾಗುತ್ತದೆ. ತಾಯಿ ಮನೆಗೆಲಸದಿಂದ ಸಂಸಾರ ತೂಗಿಸುತ್ತಿದ್ದಳು. ಕೆಲಸ ಮಾಡುವ ಮನೆಗಳಿಂದ ತರುವ ಅನ್ನ, ಸಾರೇ ಅವರ ಹೊಟ್ಟೆಗೆ ಗತಿ. ಅವಳ ತಾಯಿಗೆ ಮೈಯಲ್ಲಿ ಸ್ವಸ್ಥವಿಲ್ಲದಿದ್ದರೆ ಅವಳಿಗೆ ಉಪವಾಸವೇ. ಎಷ್ಟೋ ಬಾರಿ ನಾನು ಅವಳಿಗೆ ತಿಂಡಿ ಕೊಡಿಸಿದ್ದುಂಟು.

ಕೆಲವು ದಿನಗಳು ಗೆಳತಿ ಮಾಧುರಿ ಕಾಲೇಜಿಗೆ ಬಾರದಿದ್ದುದರಿಂದ ಅವಳ ಮನೆಗೆ ಹೋಗಿದ್ದೆ, ನನ್ನನ್ನು ಕಂಡ ಕ್ಷಣ ಅವಳ ದುಃಖದ ಕಟ್ಟೆಯೊಡೆದು ಬಂದಿತ್ತು. ಅವಳು ಸುಧಾರಿಸಿಕೊಂಡ ಮೇಲೆ ತಿಳಿಯಿತು, ಅವಳ ತಾಯಿ ಇನ್ನಿಲ್ಲವೆಂದು. ಅವಳು ಬಿಕ್ಕುತ್ತಾ, "ನೋಡೆ, ಶಾಲಿನಿ, ನಾನು ಕಾಲೇಜು ಬಿಟ್ಟಾಯ್ತು. ನಮ್ಮ ಅಮ್ಮ ಕೆಲಸ ಮಾಡುತ್ತಿದ್ದ ಮನೆಗಳಲ್ಲಿ ನನಗೂ ಕೆಲಸವಿದೆ" ಎಂದಿದ್ದಳು. ನನಗೂ ಕಣ್ಣಲ್ಲಿ ನೀರುಕ್ಕಿತ್ತು. "ಪಾಪ, ಎಷ್ಟು ಸಣ್ಣ ವಯಸ್ಸಿಗೆ ಎಂಥ ಕಷ್ಟವಪ್ಪಾ" ಎಂದು ನೊಂದುಕೊಂಡು ಅಲ್ಲಿಂದ ಹೊರಟಿದ್ದೆ.

ಸ್ವಲ್ಪ ದಿನಗಳಾದ ನಂತರ ಮತ್ತೊಮ್ಮೆ ಸಿಕ್ಕಿದ್ದಳು. ನನ್ನ ಗೆಳತಿ, ಅವಳ ಮುಖದಲ್ಲಿ ಸಂತೋಷದ ಛಾಯೆ ಕಾಣುತ್ತಿತ್ತು, ಕಾರಣವನ್ನೂ ನನಗೆ ಉತ್ಸಾಹದಿಂದ ಹೇಳಿದ್ದಳು. ಅವಳಿಗೆ ಒಬ್ಬ ಆಗರ್ಭ ಶ್ರೀಮಂತರ ಮನೆಯಲ್ಲಿ ಅಡಿಗೆಯ ಕೆಲಸ ಸಿಕ್ಕಿದ್ದು ಇವಳು ಅನಾಥಳೆಂದು ತಿಳಿದುಕೊಂಡ ಆ ಮನೆಯ ಯಜಮಾನ ಈಕೆಗೆ ತಮ್ಮ ಮನೆಯ ಕೋಣೆಯೊಂದನ್ನು ಇವಳ ವಾಸ್ತವ್ಯಕ್ಕೆ ಬಿಟ್ಟುಕೊಟ್ಟಿದ್ದನ್ನು ತಿಳಿಸಿದ್ದಳು. ಅದಕ್ಕೂ ಹೆಚ್ಚಿನ ಸಂತೋಷವೆಂದರೆ, ಆ ಮನೆಯವರ ಮಗ ಈಕೆಯ ಗುಣ, ರೂಪ ಮೆಚ್ಚಿ ಪ್ರೇಮಿಸುತ್ತಿರುವುದು. ಸಧ್ಯದಲ್ಲೇ ಮದುವೆಯಾಗುವುದೆಂಬ ಸಂತೋಷದ ಸುದ್ದಿ ಹೇಳಿದ್ದಳು. ನನಗೆ ನನ್ನ ಗೆಳತಿ ಈಗಲಾದರೂ ಜೀವನದಲ್ಲಿ ಸಂತೋಷ ಕಂಡಳಲ್ಲಾ ಎಂದು ಹೃದಯ ತುಂಬಿ ಬಂದಿತ್ತು.

ಆದರೀಗ ವಿಧಿ ಎಣಿಸಿದ್ದೆ ಬೇರೆ. ಮಾಧುರಿ ನನಗೆಂದು ಬರೆದ ಕಟ್ಟಕಡೆಯ ಪತ್ರ ನನ್ನ ಮುಂದಿದೆ. ಇವಳು ಅನಾಥಳೆಂದು ತಿಳಿದಿದ್ದ ದೀಪಕ್ ಪ್ರೀತಿಯ ಸೋಗಿನಿಂದ ಆಕೆಯ ಜೀವನದೊಡನೆ ಆಟವಾಡಿ ಅವಳಿಗೆ ಮೋಸ ಮಾಡಿದ್ದ. ಆ ನಕಲಿ ಪ್ರೇಮಿ ದೀಪಕ್ ಈಕೆ ಗರ್ಭಿಣಿಯೆಂದು ತಿಳಿದಾಗ ಈಕೆಯ ಗರ್ಭದಲ್ಲಿನ ಕುಡಿಯನ್ನು ಚಿವುಟಿಹಾಕುವ ಯತ್ನ ನಡೆಸಿದ್ದ, ಅವಳ ಕೈಗೆ ದುಡ್ಡು ಕೊಟ್ಟು ರಹಸ್ಯವಾಗಿ "ಅಬಾರ್ಷನ್" ಮಾಡಿಸಿಕೊಳ್ಳುವ ಸಲಹೆ ನೀಡಿದ್ದ. ಈಕೆ ಬೇರೆ ದಾರಿ ಕಾಣದೆ, ಆಸ್ಪತ್ರೆಗೆ ಹೋಗಿ ಮಹಿಳಾ ವೈದ್ಯೆಯನ್ನು ಕೇಳಿದಾಗ ವೈದ್ಯೆ ಪರೀಕ್ಷಿಸಿ. ಬಹಳ ನಿಶ್ಯಕ್ತಿಯಿರುವುದರಿಂದ ಅಬಾರ್ಷನ್ ಅಸಾಧ್ಯವೆಂದು ತಿಳಿಸಿ

ದಾಗ ಅವಳ ಸ್ಥಿತಿ ಏನಾಗಿರಬೇಡ? ತನ್ನಂತೆ ತಂದೆ ಇಲ್ಲದ ಮಗುವನ್ನು ಸಮಾಜದಲ್ಲಿ ಬೆಳೆಸುವ ಧೈರ್ಯವಿಲ್ಲದೆ, ತನ್ನ ಪರಿಸರವನ್ನು ಎದುರಿಸುವ ಸ್ಥೈರ್ಯ, ಆತ್ಮಶಕ್ತಿಯಿಲ್ಲದೆ ನೇಣು ಹಾಕಿಕೊಳ್ಳುವ ಮೂಲಕ ತನ್ನ ಜೀವನದ ಎಲ್ಲ ಸಮಸ್ಯೆಗಳಿಗೂ ಮಂಗಳ ಹಾಡಿದ್ದಳು. ಈ ಕಥೆಯನ್ನೇ ಅವಳ ಪತ್ರ ನನಗೆ ತಿಳಿಸಿತ್ತು. ಪ್ರೀತಿ, ವಿಶ್ವಾಸಗಳನ್ನು ಕಾಣದೆ, ಬಾಯಾರಿದ್ದ ನನ್ನ ಗೆಳತಿ ವಂಚನೆಗೆ ಬಲಿಯಾದಳು. ಮುಗ್ಧ ಮನದ ಮಾಧುರಿ ಮಾತ್ರ ಅಪರಾಧಿನಿಯೆ? ನಂಬಿಸಿ ಕುತ್ತಿಗೆ ಕೊಯ್ದ ಆ ಯುವಕನಿಗೆ ಏನೂ ಶಿಕ್ಷೆಯಿಲ್ಲವೆ? ದಿನದಿನವೂ ಇಂಥ ಸಮಸ್ಯೆಗಳನ್ನು, ದುರಂತಗಳನ್ನು ನಿರ್ಮಿಸುತ್ತಿರುವ ಸಮಾಜ ಇನ್ನೆಂದಿಗೆ ಇಂಥವಕ್ಕೆಲ್ಲ ಉತ್ತರ ನೀಡುವುದು?

ಜಿ. ರುಕ್ಮಿಣಿ

---

# ಸ್ತ್ರೀಯರ – ಸ್ಥಾನಮಾನ

ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ವೇದಗಳ ಕಾಲದಲ್ಲಿ ಸ್ತ್ರೀಯರಿಗೆ ಮಹತ್ವದ ಸ್ಥಾನಮಾನಗಳನ್ನು ನೀಡಲಾಗಿದೆಯೆಂದು ಹೇಳಲಾಗುತ್ತದೆ. ವೇದಗಳ ಕಾಲದಲ್ಲಿ ಮಹಿಳೆಯರಿಗೆ ನೀಡಲಾದ ಗೌರವಯುತ ಸ್ಥಾನ, ಪ್ರಾಶಸ್ತ್ಯ ಮುಂತಾದವುಗಳನ್ನು ಕುರಿತು ಮಾತನಾಡುವಾಗಲೆಲ್ಲ 'ಯತ್ರ ನಾರ್ಯಸ್ತು ಪೂಜ್ಯಂತೇ ತತ್ರ ರಮಂತೇ ದೇವತಾಃ' ಎಂಬ ಶ್ಲೋಕವನ್ನು ಉದ್ಧರಿಸಲಾಗುತ್ತದೆ.

ಒಂದು ನೆಲೆಯಲ್ಲಿ ಸ್ತ್ರೀಯರಿಗೆ ಗೌರವಯುತ, ಪೂಜ್ಯ ಸ್ಥಾನವನ್ನು ನೀಡಿರುವುದು ಕಂಡು ಬಂದಂತೆ, ಇನ್ನೊಂದು ಕಡೆ ಸ್ತ್ರೀಯರನ್ನು ತೊತ್ತುಗಳಂತೆ ನಡೆಸಿಕೊಂಡಿರುವ ನಿದರ್ಶನಗಳು ಇವೆ. ಜೊತೆಯಲ್ಲಿ ಜನಸಾಮಾನ್ಯ ಮಹಿಳೆಯರ ಸ್ಥಿತಿಗತಿಗಳನ್ನು ಚಿತ್ರಿಸುವ ನಿದರ್ಶನಗಳು ಅಪರೂಪವೆನ್ನಬಹುದು. ಮೂಲಭೂತವಾಗಿ ಸ್ತ್ರೀಯರ ವ್ಯಕ್ತಿತ್ವವನ್ನು 'ಗೃಹ' ದ ಚೌಕಟ್ಟಿನೊಳಗೆ ನೋಡಲಾಗುತ್ತದೆ.

ಇಂದಿನ ಮುಂದುವರಿದ ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನ ಏನು? ಗಂಡು ಹೆಣ್ಣುಗಳ ಸಂಬಂಧ ಎಂತಹದು ಎಂಬ ಬಗ್ಗೆ ನಾವು ಯೋಚಿಸಬೇಕು.

ಹೆಣ್ಣು ಗಂಡಿಗೆ ಸರಿಸಮನಾಗಿ ನಿಂತು ಎಲ್ಲಾ ರಂಗದಲ್ಲಿ ಭಾಗವಹಿಸಿ ಸರಿಸಾಟಿಯಾಗಬೇಕೆಂಬುದು ನನ್ನ ಅಭಿಪ್ರಾಯ. ಇದನ್ನು ಒಪ್ಪದ ಕೆಲವು ಸಂಪ್ರದಾಯವಾದಿಗಳು 'ಹೆಣ್ಣಿಗೆ ಒಂದು ಸೀಮಿತ ಎಲ್ಲೆ ಇದೆ ಆ ಎಲ್ಲೆಯನ್ನು ದಾಟಿದ ಹೆಣ್ಣು ಸಮಾಜದ ದೃಷ್ಟಿಯಲ್ಲಿ ಕೀಳಾಗುತ್ತಾಳೆ' ಎನ್ನುತ್ತಾರೆ. ಆದರೆ ವಾಸ್ತವವಾಗಿ ನಾರಿಯರು ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಸಮಾನ ಅವಕಾಶ ಪಡೆದಿದ್ದಾರೆ. ರಾಜಕೀಯವಾಗಿ, ವೈಜ್ಞಾನಿಕವಾಗಿ, ಶೈಕ್ಷಣಿಕವಾಗಿ ಹೆಣ್ಣು ಇಂದು ಪ್ರಭುದ್ಧ ಸ್ಥಿತಿಯನ್ನು ತಲುಪಿದ್ದಾಳೆ ಎನ್ನುವುದು ನಿರ್ವಿವಾದ.

ಗಂಡು ಹೆಣ್ಣುಗಳ ನಡುವಿನ ಸಂಬಂಧ ಹೇಗಿರಬೇಕು ಎನ್ನುವ ಬಗ್ಗೆ ಒಂದು ಮಾತು. ಗಂಡು ಹೆಣ್ಣುಗಳ ನಡುವೆ ಪರಸ್ಪರ ಸ್ನೇಹವಿರಬೇಕು, ವಿಚಾರಗಳನ್ನು ಮುಕ್ತವಾಗಿ ಚರ್ಚಿಸುವ ಮನೋಭಾವನೆ ಹೊಂದಿರಬೇಕು. ಪವಿತ್ರವಾದ ಪ್ರೇಮವಿರಬೇಕು- ಪ್ರೇಮ ಎಂದೊಡನೆ ಕಾಮವನ್ನೇ ಪ್ರೇಮವೆಂದು ಭಾವಿಸುವುದು ಮೂರ್ಖತನವಾದೀತು. ಕ್ಷಣಿಕ ಸುಖದ ಕಾಮ ಎಂದಿಗೂ ಪ್ರೇಮವಾಗಲಾರದು. ಕಾಮ ಪ್ರೇಮದ ಅವಿಭಾಜ್ಯ ಅಂಗವಾಗಬಹುದೇ ಹೊರತು ಕಾಮವೇ ಪ್ರೇಮವಲ್ಲ ಆದುದರಿಂದ ಇಂದಿನ ಯುವಜನಾಂಗ ಭಾವಿಸುವಂತೆ ಕಾಲೇಜು ಹುಡುಗ-ಹುಡುಗಿಯರ ನಡುವಿನ ವಸ್ತ್ರ, ಆಕರ್ಷಣೆ, ಸೌಂದರ್ಯದ ಆಕರ್ಷಣೆ, ನವನಾಗರೀಕತೆ ಹೆಸರಿನಲ್ಲಿ ನಡೆಸುವ ಮೋಜಿನಾಟ ಪ್ರೇಮವಲ್ಲ. ಪ್ರೇಮ ಎನ್ನುವುದು ಗಂಡು ಹೆಣ್ಣುಗಳ ನಡುವಿನ ಮಾನಸಿಕ ಸಮಾನ ಸ್ಥಿತಿ. ತಮ್ಮ ತಮ್ಮೊಳಗೆ ಸಮಾನತೆ ಕಂಡುಕೊಳ್ಳುವ ಸುಖ ದುಃಖಗಳಿಗೆ ಸ್ಪಂದಿಸುವ ಎರಡು ಹೃದಯಗಳ ಮಿಲನವೇ ಪ್ರೇಮ. ಪವಿತ್ರ ಪ್ರೇಮ ವಿವಾಹ ಬಂಧವಕ್ಕೆ ಒಳಪಡಬಹುದು ಅಥವಾ ಒಳಪಡದೇ ಇರಬಹುದು, ಆದರೆ ಎರಡು ಮನಗಳ ನಡುವೆ ಏರ್ಪಡಬಹುದಾದ ಒಂದು ಮಾನಸಿಕ ಕ್ರಿಯೆ.

ವಿವಾಹ ಎಂಬುದು ಗಂಡು ಹೆಣ್ಣುಗಳ ನಡುವೆ ನಡೆಯಬಹುದಾದ ಒಂದು ಸಾಂಪ್ರದಾಯಿಕ ವಿಧಿ. ಗಂಡು ಹೆಣ್ಣುಗಳು ಸುಖ-ದುಃಖ, ಕಾಮ-ಪ್ರೇಮ ಮುಂತಾದವುಗಳನ್ನು ತಮ್ಮೊಡನೆ ಹಂಚಿಕೊಳ್ಳಲು ಪಡೆಯುವ ಪರವಾನಗಿ. ಇದಕ್ಕಾಗಿ ಘನತೆ-ಗೌರವದ ಹೆಸರಿನಲ್ಲಿ ನಡೆಯುವ ದುಂದುವೆಚ್ಚ ಭವಿಷ್ಯದ ಆಪತ್ತು ಆತಂಕಗಳಿಗೆ ನೀಡುವ ಆಹ್ವಾನವಾಗಿರುತ್ತದೆ. ಆದುದರಿಂದಲೇ ಗಂಡು ಹೆಣ್ಣುಗಳ ನಡುವೆ ಪರಸ್ಪರ ಪ್ರೀತಿ-ಸಾಮರಸ್ಯ ಉಂಟಾಗಬೇಕು. "ಸಾಮರಸ್ಯವೇ ಜೀವನದ ಸ್ವಾರಸ್ಯ." ಇದನ್ನರಿತರೆ ಬಾಳು ಸುಗಮ.

ಇಂದು ಸಮಾಜದಲ್ಲಿ ನಡೆಯುತ್ತಿರುವ ಎಷ್ಟೋ ಕಳ್ಳ ವ್ಯವಹಾರದಂತೆ ಗಂಡು ಹೆಣ್ಣುಗಳ ನಡುವೆ ಮದುವೆಗೆ ಮುಂಚೆ ಏರ್ಪಡಬಹುದಾದ ದೇಹ ಸಂಪರ್ಕ ಕ್ರಿಯೆಯಲ್ಲಿ ಇಬ್ಬರದೂ ಪಾಲಿದ್ದರೂ ಸಮಾಜದ ದೃಷ್ಟಿಯಲ್ಲಿ ಹೆಣ್ಣು ಅಪರಾಧಿನಿಯಾಗುತ್ತಾಳೆ. ಸಮಾಜವನ್ನು ಎದುರಿಸದ ಹೆಣ್ಣು ಸಾವನ್ನು ಬಯಸುತ್ತಿದ್ದಾಳೆ. ಇಂತಹ ಪರಿಸ್ಥಿತಿ ಬದಲಾಗಬೇಕು. ಬದುಕುವ ಹಕ್ಕು ಎಲ್ಲರಿಗೂ ಇದ್ದೇ ಇದೆ. ಬದುಕುವ ಹಕ್ಕನ್ನು ಕಿತ್ತುಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ. 'ಬದುಕಿಗಾಗಿ ಹೋರಾಟ' ಎಂಬ ಡಾರ್ವಿನನ ತತ್ವ ನಂಬಿ ಸಮಾಜದ [illegible] ಶಕ್ತಿಗಳ [illegible] ಪ್ರತಿಭಟಿಸುವ ಸಲುವಾಗಿ ಬಲಿಷ್ಠರಾಗಿ [illegible] ಹೋರಾಡುವ ನಿರ್ಧಾರವನ್ನು ಮಹಿಳೆಯರು ಕೈಗೊಳ್ಳಬೇಕು.

ಪರಿಸ್ಥಿತಿಯ ಒತ್ತಡದಿಂದ ಅತ್ಯಾಚಾರಕ್ಕೆ ಬಲಿಯಾಗುವ ಮಾನಿನಿಯರ ಬಗ್ಗೆ ಮಾನವೀಯತೆ ತೋರಬೇಕಾದುದು ಪುರುಷನ ಕರ್ತವ್ಯವಾಗಿದೆ. ಮಾನವೀಯತೆಯನ್ನು ಪ್ರೀತಿಸುವ ಪ್ರತಿಯೊಬ್ಬ ಪುರುಷನೂ ಸ್ತ್ರೀ ಬಗ್ಗೆ ಗೌರವ ಭಾವನೆ ಹೊಂದಬೇಕು. ಗಂಡು ಹೆಣ್ಣಿನ ಪ್ರೇಮದ ಫಲವಾಗಿ ಉದಯಿಸಬಹುದಾದ ಮಗುವನ್ನು ಕಾಮದ ಪ್ರತಿರೂಪವೆಂದು ತಿಳಿಯದೇ ಪ್ರೇಮದ ಪುತ್ಥಳಿ ಎಂದು ಭಾವಿಸುವಂತಾಗಬೇಕು.

ಮಾನವೀಯ ಮೌಲ್ಯಗಳನ್ನು ರಕ್ಷಿಸುವ ನೈತಿಕ ಹೊಣೆ ಹೊತ್ತಿರುವ ಪ್ರತಿಯೊಬ್ಬರು ತಮ್ಮ ಸಭ್ಯ ನಡವಳಿಕೆಯಿಂದ ಮಾನಿನಿಯರ ಅಭಿಮಾನ ಹಾಗೂ ಗೌರವ ಗಳಿಸಬೇಕಾದುದು ಆದ್ಯ ಕರ್ತವ್ಯ ಹಾಗೂ ಅನಿವಾರ್ಯವಾಗಿದೆ. ಈ ದಿಸೆಯಲ್ಲಿ ನಾವೆಲ್ಲ ಪ್ರಯತ್ನಿಸ ಬೇಕಾದುದು ಅತ್ಯಗತ್ಯ ಹಾಗೂ ಆದರಣೀಯವಾಗಿದೆ.

ಎನ್. ಎಸ್. ಸೀತಾರಾ.

---

## ಅನಾಥ ಮಹಿಳೆಯರಿಗೊಂದು ಆಶಾಕಿರಣ

ಆರ್ಥಿಕ ಸ್ವಾತಂತ್ರ್ಯವಿಲ್ಲದ ವಯಸ್ಕ ಸ್ತ್ರೀಯರಿಗೆ ಬದುಕೇ ದುಸ್ತರ. ವಿಧವೆಯರು, ಮಕ್ಕಳಿಲ್ಲದ, ಇದ್ದರೂ ಮಕ್ಕಳ ಅಲಕ್ಷ್ಯಕ್ಕೆ ಗುರಿಯಾದವರು ಒಪ್ಪೊತ್ತಿನ ಊಟಕ್ಕಾಗಿ ತಮ್ಮ ಕೈಲಾಗದಿದ್ದರೂ ಮನೆಗೆಲಸಕ್ಕೆ ತೊಡಗುತ್ತಾರೆ, ಇಲ್ಲವೇ ಭಿಕ್ಷೆ ಬೇಡುತ್ತಾರೆ. ೨ ಹೊತ್ತಿನ ಊಟಕ್ಕೇ ಬರವಿರುವ ಇಂಥವರಿಗೆ ಅನಾರೋಗ್ಯವೂ ಸಾಮಾನ್ಯ. ಇನ್ನು ವಸ್ತ್ರ, ವಸತಿಗಳ ಮಾತಂತೂ ದೂರವೇ.

ತ್ರಿಪುರಾದ ಮುಖ್ಯಮಂತ್ರಿ ಸುಧೀರ್ ರಂಜನ್ ಮುಜುಂದಾರ್‌ರವರ ಪತ್ನಿ ಮಿಲನ್ ಪ್ರಭಾ ಮುಜುಂದಾರ್ ಇಂತಹ ಅನಾಥ, ನಿರಾಶ್ರಿತ ಮಹಿಳೆಯರ ನೋವು, ವಿಲಾಪಗಳಿಗೆ ಪರಿಹಾರ ನೀಡಲೆತ್ನಿಸುತ್ತಿದ್ದಾರೆ. ಸರ್ಕಾರಿ ಶಾಲೆಯಲ್ಲಿ ಉಪಾಧ್ಯಾಯಿನಿಯಾಗಿ ಸೇವೆ ಸಲ್ಲಿಸುತ್ತಿರುವ ಈಕೆಗೆ ಮೊದಲಿನಿಂದಲೂ ಅನಾಥ ಮಹಿಳೆಯರಿಗೆ ಪರಿಹಾರ ಒದಗಿಸುವ ಬಯಕೆ. ತಾವು ಶಾಲೆಗೆ ಹೋಗುವಾಗ ಕಾಣುತ್ತಿದ್ದ ನೂರಾರು ಮಂದಿ ದುಃಖೀ ಮಹಿಳೆಯರ ಕಷ್ಟ ಕೋಟಲೆಗಳನ್ನು ದೂರಮಾಡಲು, ಅವರಿಗೆ ಸಹಾಯ ಹಸ್ತ ನೀಡಲು ಮನಸ್ಸು ಹಾತೊರೆಯುತ್ತಿತ್ತು.

ಈ ತುಡಿತದ ಫಲವಾಗಿ ಒಂದು ಯೋಜನೆ ರೂಪಿತವಾಯಿತು. ಮೊದಲಿಗೆ ೧೨ ಜನರಿಗೆಂದು ರೂಪಿಸಿದ ಈ ಯೋಜನೆಯಲ್ಲಿ, ವರ್ಗ, ಜಾತಿ ಭೇದವಿಲ್ಲದೆ ೧೨ ಮಂದಿ ಮಹಿಳೆಯರಿಗೆ ವಸತಿ, ಒಬ್ಬರು ಅಡಿಗೆಯವರು, ಕಸ ಗುಡಿಸಲು ಒಬ್ಬರು ಹಾಗೂ ಕಛೇರಿಯ ಕೆಲಸ ಕಾರ್ಯ ನೋಡಿಕೊಳ್ಳಲು ಒಬ್ಬರು ವೃದ್ಧ ಮಹಿಳೆಯನ್ನು ನೇಮಿಸಿದರು. ೧೬ ಜನರ ಕಮಿಟಿಯನ್ನು ಪ್ರಾರಂಭಿಸಿ, ಇವರ ದೇಣಿಗೆ, ವಂತಿಗೆಗಳಿಂದಲೇ "ಅಬಲಂಬನ್" ವನ್ನು ನಡಸಲು ನಿರ್ಧರಿಸಿದರು. ಉಚಿತ ವೈದ್ಯಕೀಯ ಸೇವೆಯನ್ನೂ ಒಳಗೊಂಡಿತ್ತು. ಒಂದು ತಿಂಗಳೊಳಗೆ ೧೨ ರಿಂದ ೧೬ಕ್ಕೇರಿದ ಈ ವಸತಿ ಗೃಹದಲ್ಲಿ ೬೩ ಅರ್ಜಿಗಳು ಕಮಿಟಿಯ ಅನುಮೋದನೆಗಾಗಿ ಕಾದುಕುಳಿತಿವೆ. ೧೯ ಮಂದಿ ಸದಸ್ಯರಿರುವ ಈ ಕಮಿಟಿಯಲ್ಲಿ ಜನರಲ್ ಸೆಕ್ರೆಟರಿಯಾಗಿರುವ ಶ್ಯಾಮಲ್ ದೇಬ್ ಒಬ್ಬರೇ ಪುರುಷ ಸದಸ್ಯರು. ಗಿರಿಜನ ಜನಾಂಗದ ಇಬ್ಬರು ಮಹಿಳೆಯರೂ ಇದ್ದಾರೆ. ತಮ್ಮ ಮುಂದಿನ ಯೋಜನೆಯಲ್ಲಿ ೧೦೦ ಮಂದಿ ನಿರಾಶ್ರಿತೆಯರಿಗೆ ಆಶ್ರಯ ಕಲ್ಪಿಸುವ ಗುರಿಯಿದೆ ಎಂದು ಮಿಲನ್ ಪ್ರಭಾ ನುಡಿಯುತ್ತಾರೆ. ಇದರೊಂದಿಗೆ ಉದ್ಯೋಗಸ್ಥೆಯರಿಗಾಗಿ ಹಾಸ್ಟೆಲ್‌ನ ಅನುಕೂಲತೆಯನ್ನು ಒದಗಿಸುವ ಹವಣಿಕೆಯೂ ಇವರಿಗಿದೆ. ಈಗ ಸರ್ಕಾರದ ಗ್ರಾಂಟ್‌ಗಾಗಿ ಕಾಯುತ್ತಿರುವುದಾಗಿಯೂ, ಗ್ರಾಂಟ್ ಮಂಜೂರಾದರೆ ೫೦ ಮಂದಿ ಅಸಹಾಯ ಮಹಿಳೆಯರಿಗೆ ಅನುಕೂಲ ಮಾಡಿಕೊಡಬಹುದೆನ್ನುತ್ತಾರೆ ಮಿಲನ್ ಪ್ರಭಾ.

ಬಂಧು ಬಳಗದವರಿಗೆ ಬೇಡವಾಗಿ, ಸಮಾಜದಿಂದ ತಿರಸ್ಕೃತರಾಗಿ ಅನಾರೋಗ್ಯ, ಹಸಿವು, ಇತ್ಯಾದಿ ಸಂಕಷ್ಟಗಳಿಗೆ ಗುರಿಯಾಗಿ ಬದುಕೇ ಭಾರವೆನಿಸಿರುವಂಥ ಮಹಿಳೆಯರಿಗೆ ಅಬಲಂಬನ್ ನಿಜಕ್ಕೂ ಒಂದು ಆಶಾಕಿರಣವಾಗಿದೆ. ಇವರಿಗಾಗಿ ಮಿಲನ್ ಪ್ರಭಾ ತಮ್ಮ ಸಂಗಡಿಗರೊಂದಿಗೆ ಸಮಯದ ಪರಿವೆಯಿಲ್ಲದೆ ಅವಿಶ್ರಾಂತವಾಗಿ ದುಡಿಯುತ್ತಿದ್ದಾರೆ. ತಮ್ಮ ಕನಸಿಗೊಂದು ಪರಿಪೂರ್ಣ ರೂಪಕೊಡುವುದೇ ಪ್ರಮುಖ ಧ್ಯೇಯ ಎನ್ನುವ ಮಿಲನ್ ಪ್ರಭಾ ಸರ್ಕಾರವೇ ಇಂತಹ ಅನಾಥಾಶ್ರಮಗಳನ್ನು ನಡೆಸಬೇಕಾದರೂ, ತ್ರಿಪುರಾದಂತಹ ಹಿಂದುಳಿದ ರಾಜ್ಯದಲ್ಲಿ ಅದು ಅಸಾಧ್ಯದ ಸಂಗತಿ. ಹೀಗಿರುವಾಗ ಖಾಸಗಿ ವ್ಯಕ್ತಿಗಳೂ ಔದಾರ್ಯದಿಂದ ಮುಂದೆ ಬಾರದಿದ್ದರೆ ಇಂತಹ ನಿರಾಶ್ರಿತ ದುಃಖಿನಿಯರ ಪಾಡೇನು ಎಂದು ಪ್ರಶ್ನಿಸುತ್ತಾರೆ.

# ಡಾ|| ಕೆ. ವೆಂಕಟಲಕ್ಷ್ಮಮ್ಮ

ಭಾರತದ ಭವ್ಯ ಸಾಂಸ್ಕೃತಿಕ ಪರಂಪರೆಗಳಲ್ಲಿ ನೃತ್ಯ ಪರಂಪರೆಯೂ ಸೇರಿದೆ. ನೃತ್ಯವೆಂದರೆ ದಕ್ಷಿಣ ಭಾರತೀಯರಿಗೆ ಭರತನಾಟ್ಯದ ನೆನಪಾಗುವುದು ಸಹಜ. ಭರತಮುನಿಯ ಸೃಷ್ಟಿ ಎಂದು ಪ್ರತೀತಿಯಿರುವ ಈ ನೃತ್ಯ ಕಲೆಯೂ ಉಳಿದೆಲ್ಲ ಕಲೆಗಳಂತೆ ರಾಜಾಶ್ರಯದಲ್ಲೇ ಬೆಳೆದು ಬಂದಿದ್ದು, ಕೇವಲ ವಿಶೇಷ ಸಂದರ್ಭಗಳಲ್ಲಿ ಮಾತ್ರ ಸಾರ್ವಜನಿಕರಿಗೆ ಇದರ ರಸ ಸುಧೆ ದೊರೆಯುತ್ತಿತ್ತು. ಭರತನಾಟ್ಯಕ್ಕೆ ತಮಿಳುನಾಡಿನಲ್ಲಿ ದೊರೆತ ಪ್ರೋತ್ಸಾಹ, ಗೌರವಗಳಿಂದಾಗಿ ಸಂಪೂರ್ಣ ಅಲ್ಲಿಯದೇ ಎಂಬಂತೆ ಆಗಿದ್ದರೂ, ಕರ್ನಾಟಕದ ಇತಿಹಾಸದಲ್ಲೂ ನೃತ್ಯ ಪರಂಪರೆ ಇಲ್ಲದಿಲ್ಲ. ಇಲ್ಲಿನ ಪಟ್ಟದರಸಿಯರೇ ನೃತ್ಯಗಾರ್ತಿಯರಾಗಿದ್ದುದು ತಿಳಿಯದುದೇನಲ್ಲ. ವಿಜಯನಗರದ ಅರಸರ ನಂತರ ಮೈಸೂರಿನ ಒಡೆಯರೇ ಪ್ರಮುಖ ರಾಜಮನೆತನವಾಗಿದ್ದು ಹಲವಾರು ಕಲಾವಿದರಿಗೆ, ಬಹಳಷ್ಟು ಕಲೆಗಳಿಗೆ ನೆರಳು ನೀಡಿದ್ದು ಸರ್ವವಿದಿತ. ಅಂತೆಯೇ ನೃತ್ಯದಲ್ಲೂ ತನ್ನದೇ ಆದ ವೈಶಿಷ್ಟ್ಯ ಬೆಳೆಸಿಕೊಂಡು 'ಮೈಸೂರು ಶೈಲಿ'ಯ ನೃತ್ಯ ಪರಂಪರೆಯ ಉಗಮ ಈ ಸಂಸ್ಥಾನದ ಕೊಡುಗೆ. ಈ ~~ಪರಂಪರೆಯ ಅತ್ಯಂತ ಹಿರಿಯ ಕಲಾವಿದೆ ಡಾ|| ಕೆ. ವೆಂಕಟಲ~~ಕ್ಷ್ಮಮ್ಮ. 83 ವರ್ಷದ ಈ ಪ್ರತಿಭಾನ್ವಿತ ಕಲಾವಿದೆ ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ 'ಆಸ್ಥಾನ ಕಲಾವಿದೆ'ಯಾಗಿದ್ದು ಈ ತಲೆಮಾರಿಗೆ ಸಾಂಸ್ಕೃತಿಕ ಕೊಂಡಿಯಾಗಿ ನಮ್ಮ ನಡುವೆ ಇರುವುದು ಹೆಮ್ಮೆಯ ಸಂಗತಿ. ಈ ವರ್ಷ ಗಾಯನ ಸಮಾಜ ತನ್ನ 21ನೇ ಸಂಗೀತ ಸಮ್ಮೇಳನಕ್ಕೆ ಡಾ|| ಕೆ. ವೆಂಕಟಲಕ್ಷ್ಮಮ್ಮನವರನ್ನು ಅಧ್ಯಕ್ಷೆಯನ್ನಾಗಿಸುವುದರ ಮೂಲಕ ತನ್ನನ್ನು ತಾನೇ ಗೌರವಿಸಿಕೊಂಡಿದೆ ಎನ್ನಬಹುದು.

ವೆಂಕಟಲಕ್ಷ್ಮಮ್ಮನವರ ಹುಟ್ಟೂರು ಕಡೂರಿನ ಪುಟ್ಟ ಹಳ್ಳಿ ತಂಗಲಿ. ಪ್ರಾಥಮಿಕ ಹಂತದವರೆಗಷ್ಟೇ ವಿದ್ಯಾಭ್ಯಾಸ. ಕಿಶೋರಿ ವೆಂಕಟಲಕ್ಷ್ಮಮ್ಮ ನಾಟಕದಲ್ಲಿ ಅಭಿನಯಿಸಿ ಎಲ್ಲರ ಪ್ರಶಂಸೆಗೆ ಪಾತ್ರವಾಗಿದ್ದು ಜೊತೆಗೆ ಮೊಮ್ಮಗಳ ಕಲಾಸಕ್ತಿಯನ್ನು ಕಂಡು ನೃತ್ಯ ಕಲಿಸುವ ಮನ ಮಾಡಿದರು ಆಕೆಯ ತಾತ. ಆ ಕಾಲದಲ್ಲಿ ಸಂಗೀತ, ನೃತ್ಯಗಳ ಬೀಡಾಗಿದ್ದ ಮೈಸೂರಿಗೆ ಬಂದು 'ಜಟ್ಟಿ ತಾಯಮ್ಮ'ನವರಲ್ಲಿ ಮೊಮ್ಮಗಳ ಪರವಾಗಿ ನೃತ್ಯ ಭಿಕ್ಷೆ ಬೇಡಿದರು.

ಜಟ್ಟಿ ತಾಯಮ್ಮನವರು ಮೈಸೂರು ದರ್ಬಾರಿನ 'ಆಸ್ಥಾನ ನರ್ತಕಿ'ಯಾಗಿದ್ದರು. ಇವರ ನೃತ್ಯ ನೋಡಿದವರು ಬಹಳ ಮಂದಿ ಇರದಿದ್ದರೂ ಆಕೆಯ ಪ್ರತಿಭೆ, ಕಲಾ ಪ್ರೌಢಿಮೆಯ ಬಗ್ಗೆ ಹೆಚ್ಚಿನ ಮಂದಿ ಕೇಳಿದ್ದರು. ಮೈಸೂರು ಶೈಲಿಯ ನೃತ್ಯಕ್ಕೆ ಹೊಸ ಹೊಸ ಕೃತಿಗಳನ್ನು ಸೇರಿಸಿ, ಅದಕ್ಕೊಂದು ಸುಂದರ, ಸುರೂಪ ನೀಡಿ, ಅದರ ಉನ್ನತ ಸ್ಥಿತಿಗೆ ಕಾರಣರಾಗಿದ್ದರು. ಅಷ್ಟೇ ಅಲ್ಲದೆ ನಾಟ್ಯ ಶಾಸ್ತ್ರ [illegible] ವಿದ್ವಾಂಸರಾಗಿದ್ದರು. ಇಂತಹವರಲ್ಲಿ ಶಿಷ್ಯವೃತ್ತಿ ದೊರಕಿದ್ದು ಸಾಮಾನ್ಯವೇನಲ್ಲ. ಶುಭದಿನ, ಶುಭಮುಹೂರ್ತದಲ್ಲಿ ಸಾಂಪ್ರದಾಯಿಕ ಪೂಜೆಯೊಂದಿಗೆ ಪ್ರಾರಂಭವಾದ ನೃತ್ಯ ಶಿಕ್ಷಣದಲ್ಲಿ ಅಂಗಸಾಧನೆಯೂ ಸೇರಿತ್ತು. ನೃತ್ಯದೊಂದಿಗೇ ಸಂಸ್ಕೃತ, ಸಂಗೀತ ಪಾಠಗಳೂ ನಡೆದು, ಕಠಿಣ ಪರಿಶ್ರಮ, ಸತತ ಅಭ್ಯಾಸದಿಂದ ಪರಿಪೂರ್ಣತೆ ಪಡೆದರು. 13 ವರ್ಷದ ವೆಂಕಟಲಕ್ಷ್ಮಮ್ಮನ 'ರಂಗ ಪ್ರವೇಶ'ವೂ ಯಶಸ್ವಿಯಾಯಿತು.

'ಆಸ್ಥಾನ ವಿದುಷಿ'ಯಾಗುವುದು ಸುಲಭದ ಮಾತಾಗಿರಲಿಲ್ಲ. ವಿದ್ವನ್ಮಂಡಳಿಯ ಎಲ್ಲ ಪರೀಕ್ಷೆಗಳಲ್ಲೂ ಜಯಹೊಂದಿದರು. ನೃತ್ಯದ ಉಪಾಂಗಗಳಾದ ಸಾಹಿತ್ಯ, ಸಂಗೀತಗಳಲ್ಲೂ ಪರಿಣತಿ ಪಡೆದಿದ್ದ ವೆಂಕಟಲಕ್ಷ್ಮಮ್ಮ 'ಆಸ್ಥಾನ ವಿದುಷಿ'ಯಾಗಿ ಸೇರ್ಪಡೆಯಾದರು. ಆಗಿನ ಕಾಲದಲ್ಲಿ ದೇವಾಲಯ ನೃತ್ಯಗಳೂ ಇರದಿದ್ದುದರಿಂದ ಈಕೆಯ ನೃತ್ಯ ನೋಡುವ ಯೋಗ ಎಲ್ಲರಿಗೂ ಇರಲಿಲ್ಲ, ಅರಮನೆಯಲ್ಲಿ ವಿಶೇಷ ಸಂದರ್ಭಗಳಲ್ಲಿ ನರ್ತಿಸುತ್ತಿದ್ದ ಇವರ ನೃತ್ಯ ನೋಡುವ ಸೌಭಾಗ್ಯ ಜನರಿಗೆ ದೊರಕಿದ್ದು 30 ವರ್ಷಗಳಿಂದೀಚೆಗೆ. ಆಕೆಯ ನೃತ್ಯದಲ್ಲಿ ಅಭಿನಯದ ರಸಾನುಭೂತಿ, ಪಕ್ವವಾದ ಜ್ಞಾನ ಕಲಾಸಂಪತ್ತುಗಳಿಂದ ವೀಕ್ಷಕರ ಮನದಲ್ಲಿ ಮರೆಯಲಾರದ ಪ್ರಭಾವ ಬೀರುತ್ತಿದ್ದುದು ಸುಳ್ಳಲ್ಲ. ಅಭಿನಯದ ಲೇಪವಿಲ್ಲದ ನೃತ್ಯ ಪರಿಪೂರ್ಣವಾಗದೆ ಬರಿಯ ಕಸರತ್ತೆನಿಸಿಕೊಳ್ಳುತ್ತದೆಯಾದ ಕಾರಣ ಈ ಅಭಿನಯ ಸರಸ್ವತಿಯಲ್ಲಿಗೆ ಅನೇಕ ಪ್ರತಿಭಾವಂತ ಕಲಾವಿದೆಯರು ಬಂದು ಅಭಿನಯದ ತರಬೇತಿ ಪಡೆದು ಹೋಗಿದ್ದಾರೆ. ಗುರುವಿನಂತೆ ಶಿಷ್ಯೆಯೂ ವಿದ್ಯಾದಾನ ಮಾಡಿ ಅನೇಕ ಶಿಷ್ಯರನ್ನು ತಯಾರುಮಾಡಿದ್ದಾರೆ. ಕಾರ್ಯಾಗಾರಗಳಲ್ಲೂ ಕಿರಿಯರಿಗೆ ಕೈದೀವಿಗೆಯಾಗಿ ಮಾರ್ಗದರ್ಶನ ನೀಡಿದ್ದಾರೆ. ವೆಂಕಟಲಕ್ಷ್ಮಮ್ಮನವರ ಕಲಾಸೇವೆ, ಜ್ಞಾನಪ್ರೌಢಿಮೆಗಳನ್ನು ಗೌರವಿಸಿ ರಾಜ್ಯ ಮತ್ತು ಕೇಂದ್ರ ಅಕಾಡೆಮಿಗಳು ಪ್ರಶಸ್ತಿ ನೀಡಿವೆ, ಮೈಸೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ರಾಜ್ಯ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಇತ್ಯಾದಿ ಪ್ರಶಸ್ತಿಗಳೂ ದೊರೆತಿವೆ. ಇವೆಲ್ಲಕ್ಕೂ ಕಿರೀಟವಿಟ್ಟಂತೆ ಸಂಗೀತ ಸಮ್ಮೇಳನದಲ್ಲಿ ನೃತ್ಯಗಾರ್ತಿಯೊಬ್ಬರು ಅಧ್ಯಕ್ಷೆಯಾಗಿದ್ದು ರಾಜ್ಯದಲ್ಲಿ ಪ್ರಥಮ, ಅದೂ ಸಹ ಗಾಯನ ಸಮಾಜದಂತಹ ರಾಷ್ಟ್ರದ ಅಗ್ರಮಾನ್ಯ ಸಂಗೀತ ಸಭೆಗಳಲ್ಲೊಂದಾದ ಸಭೆಯಲ್ಲಿ. ಸ್ತ್ರೀಯರಿಗೇ ಪ್ರಾಧಾನ್ಯ ನೀಡಲಾಗಿರುವ ಈ ಸಮ್ಮೇಳನ ಅಕ್ಟೋಬರ್ 15 ರಿಂದ 22ರವರೆಗೆ ನಡೆಯಿತು. ಡಾ|| ಕೆ. ವೆಂಕಟಲಕ್ಷ್ಮಮ್ಮನವರಿಗೆ ಈ ಸಮ್ಮೇಳನದಲ್ಲಿ "ಸಂಗೀತ ಕಲಾ ರತ್ನ" ಬಿರುದು ನೀಡಿ ಸನ್ಮಾನಿಸಲಾಯಿತು. ಇನ್ನೊಂದು ವಿಶೇಷವೆಂದರೆ ಈ ಸಮ್ಮೇಳನದ ಕಛೇರಿಗಳನ್ನು ನಡೆಸುವ ವಿದುಷಿಯರು ಮಾತ್ರವಲ್ಲದೆ ಸನ್ಮಾನಿಸಲ್ಪಟ್ಟವರೂ ಸ್ತ್ರೀ ಕಲಾವಿದೆಯರೇ.

# ವನಿತಾ ಕಲಾ ಜಾಥಾ

ಕೇರಳದ ಹಳ್ಳಿಗಾಡುಗಳ ನಗರ ಪ್ರದೇಶಗಳ ಜನರು ಇತ್ತೀಚೆಗೆ ಒಂದು ಅಭೂತಪೂರ್ಣವಾದ ನಾವೀನ್ಯತೆಯಿಂದ ಕೂಡಿದ ಕಾರ್ಯಕ್ರಮವೊಂದನ್ನು ವೀಕ್ಷಿಸಿದರು. ಇದೇ ವನಿತಾ ಕಲಾ ಜಾಥಾ ಮಹಿಳೆಯರಲ್ಲಿ ಅವರ ಹಕ್ಕು ಬಾಧ್ಯತೆಗಳ ಬಗ್ಗೆ ಜಾಗೃತಿಯನ್ನುಂಟು ಮಾಡಲು ಕೇರಳದ ಶಾಸ್ತ್ರ ಸಾಹಿತ್ಯ ಪರಿಷತ್ತು ವನಿತಾ ಕಲಾ ಜಾಥಾವನ್ನೂ ಕಳೆದ ಅಕ್ಟೋಬರ್ ತಿಂಗಳು ಕೇರಳದಾದ್ಯಂತ ಹಮ್ಮಿಕೊಂಡಿತ್ತು.

ವಿಜ್ಞಾನವನ್ನು ಜನ ಸಾಮಾನ್ಯರಿಗೆ ತಲುಪಿಸುವುದು, ಪರಿಸರಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳಿಂದ ಅಪಾರ ಮನ್ನಣೆ ಗಳಿಸಿಕೊಂಡ ಕೇರಳ ಶಾಸ್ತ್ರ ಪರಿಷತ್ತು ಮಹಿಳೆಯರಲ್ಲಿ ಅರಿವು ಮೂಡಿಸುವ ಉದ್ದೇಶದಿಂದ ಯೋಜಿಸಲಾದ ಈ ಕಾರ್ಯಕ್ರಮ ಜನರ ಅಪಾರ ಮೆಚ್ಚುಗೆಯನ್ನು ಗಳಿಸಿತು.

ಹಳ್ಳಿಗಾಡುಗಳಲ್ಲಿ ವಾಸವಾಗಿರುವ ಬಹುಪಾಲು ಮಹಿಳೆಯರು ತಮ್ಮ ಸ್ಥಿತಿಗತಿಗಳ ಬಗ್ಗೆ ಅಜ್ಞಾನಿಗಳಾಗಿದ್ದಾರೆ. ಅವರ ದುಡಿಮೆ, ಸಮಯ, ಭಾವನಾತೀತತೆ, ಸ್ತ್ರೀತನಗಳು ಹೇಗೆ ಶೋಷಣೆಗೊಳಗಾಗುತ್ತಿವೆಯೆನ್ನುವುದರ ಅರಿವೇ ಅವರಿಗಿಲ್ಲವಾದುದು ಅವರಲ್ಲಿ ಜಾಗೃತಿಯನ್ನುಂಟು ಮಾಡುವುದು ವನಿತಾ ಕಲಾ ಜಾಥಾದ ಉದ್ದೇಶವಾಗಿದೆ. ಕಾಸರಗೋಡು, ತ್ರಿವೇಂದ್ರಮ್‌ನಿಂದ ಆರಂಭವಾದ ಕಲಾ ಜಾಥಾಗಳು ಅಕ್ಟೋಬರ್ ೨೨ ರಂದು ತ್ರಿಚೂರ್‌ನಲ್ಲಿ ಮುಕ್ತಾಯಗೊಂಡವು.

ಜಾಹೀರಾತುಗಳು ಹೇಗೆ ಸ್ತ್ರೀಯರನ್ನು ಬಳಸಿಕೊಳ್ಳುತ್ತಿವೆಯೆಂಬ ವಸ್ತುವನ್ನೊಳಗೊಂಡ ಬೀದಿ ನಾಟಕ ಬಹುಜನರನ್ನು ಆಕರ್ಷಿಸಿತು. ದೂರದರ್ಶನದಲ್ಲಿ ಕಾರ್ಯಕ್ರಮಗಳ ವಿವರಣೆ ನೀಡುವ ಮಹಿಳೆಯೊಬ್ಬಳು ರಂಗದ ಮೇಲೆ ಬಂದು ಕಾರ್ಯಕ್ರಮಗಳ ವಿವರವನ್ನು ನೀಡುತ್ತಾಳೆ. ಅವಳು ನೀಡುವ ವಿವರಗಳು ಮಾಮೂಲಿ ವ್ಯಾಪಾರೀ ದೃಷ್ಟಿಕೋನವನ್ನು ಒಳಗೊಂಡಿರುತ್ತವೆ. ಪಾಂಚಾಲಿಯ ಸೀರೆಯನ್ನು ದುಶ್ಶಾಸನ ಸೆಳೆಯುವ ದೃಶ್ಯವನ್ನು ಅಭಿನಯಿಸಲಾಗುತ್ತದೆ. ಜಾಹೀರಾತಿನ ಧ್ವನಿ ಮುಂದುವರಿಯುತ್ತದೆ. ಇಂದಿಗೂ ಸೀರೆ ಉಟ್ಟುಕೊಂಡ ಮಹಿಳೆಯರ ಸೀರೆಯನ್ನು ಸೆಳೆಯುವುದು ಮುಂದುವರಿಯುತ್ತಲೇ ಇದೆ. ಬನ್ನಿ, ನಮ್ಮ ಅಂಗಡಿಯ ರಂಗು ರಂಗಿನ ಸೀರೆಗಳನ್ನು ಇಂದೇ ಕೊಳ್ಳಿರಿ. – ವ್ಯಂಗ್ಯ, ಹಾಸ್ಯಗಳ ಮೂಲಕ ವ್ಯಾಪಾರೀ ಕುತಂತ್ರಗಳಿಗೆ ಸ್ತ್ರೀಯರು ಬಲಿಯಾಗುತ್ತಿರುವುದನ್ನು ಈ ನಾಟಕದಲ್ಲಿ ಯಶಸ್ವಿಯಾಗಿ ಪ್ರೇಕ್ಷಕರ ಮುಂದಿಟ್ಟಿತು.

ಹೆಣ್ಣು ಮಕ್ಕಳು ಹಾಗೂ ಗಂಡು ಮಕ್ಕಳನ್ನು ಬೆಳೆಸುವುಗರಲ್ಲಿರುವ ಪಕ್ಷಪಾತ, ದುಡಿಯುವ ಮಹಿಳೆಯರು ಹೊರಬೇಕಾದ ಇಮ್ಮಡಿ ಗದ ಜವಾಬ್ದಾರಿಗಳನ್ನು ಕುರಿತು ಬೀದಿ ನಾಟಕಗಳನ್ನಿಡುವುದರ ಜೊತೆಗೆ ಆರೋಗ್ಯ, ಪರಿಸರ, ಸ್ತ್ರೀಯರಿಗೆ ಸಂಬಂಧ ಪಟ್ಟ ಸಾಮಾನ್ಯ ಸಮಸ್ಯೆಗಳನ್ನು ಮಹಿಳೆಯರೊಂದಿಗೆ ಚರ್ಚಿಸಲಾಯಿತು.

---

"ಹನಿಗವನಗಳು"

"ಆ ಹೆಣ್ಣು ಸ್ಮಾರ್ಟಿಲ್ಲ,
ಈ ಹೆಣ್ಣಿನ ವರದಕ್ಷಿಣೆ ಸಾಲದಲ್ಲ
ಎಂದು ಬಂದ ಕನ್ಯೆಯರನ್ನೆಲ್ಲ
ಬಿಟ್ಟ ಅಪ್ಪಟ ಬ್ರಹ್ಮಚಾರಿಗೆ
ಮುಪ್ಪಿನಲಿ ಕಂಕಣ ಬಲ
ಕೂಡಿ ಬಂದು ಗೃಹಸ್ಥನಾದಾಗ
ಜೀವನದಲ್ಲಿ ವೈರಾಗ್ಯ ಮೂಡಿ
ಸನ್ಯಾಸಿಯಾಗಿಬಿಟ್ಟನಂತೆ."

o o o

"ಆ ಗಂಡು ಹ್ಯಾಂಡ್ಸಂ ಇಲ್ಲ,
ಈ ಗಂಡಿಗೆ ಸ್ಟೇಟಸ್ಸಿಲ್ಲ,
ಎಂದು ಬಂದ ವರಗಳನ್ನೆಲ್ಲ
ಕಡೆಗಣಿಸಿದ ಸೋಶಿಯಲ್ ಹೆಣ್ಣಿಗೆ,
ಮನಮೆಚ್ಚಿದವನ ಅರ್ಧಾಂಗಿಯಾದಾಗ,
ಆ ಗಂಡು ಸಕಲ ಚಟ ಸಂಪನ್ನನೆಂದು
ಗೊತ್ತಾಯ್ತಂತೆ!"

ಸಂಗ್ರಹ: ರಾಧಾ ಗ. ಗುತಿ
ಮೂಲ: ಚೆಲ್ಲಿಸೊ ಗುಡಿಸೊ

# ಅಕ್ಕ–ಪಕ್ಕ

ಪುರಾಣದಲ್ಲಿ ಮಹಿಳೆಯರು ಶಕ್ತಿವಂತರಾಗಿ ಕಂಡರೆ ಗಂಡಸರ ಆಕ್ಷೇಪಣೆ ಇರಲಾರದು. ಆದರೆ ನಿಜ ಜೀವನದಲ್ಲಿ ಅಲ್ಲ.

ರಾಣಿ ಜೇಥ್‌ಮಲಾನಿ.

ಹೆಣ್ಣಿನ ಶೋಷಣೆಗೆ ಸಂಬಂಧಿಸಿದಂತೆ ಬರೆಯುವಾಗ ವರದಕ್ಷಿಣೆ ಸಮಸ್ಯೆಯನ್ನೆತ್ತಿ ಹೇಳುವಾಗ ಅನೇಕ ಕವಿತೆಗಳು ಕೇವಲ ಭಾಷಣದ ಹಂತದಲ್ಲಿ ನಿಂತುಬಿಡುತ್ತವೆ. ಇದನ್ನೆಲ್ಲ ಗಮನಿಸಿದಾಗ ಈಗ ಹತ್ತು ವರ್ಷಗಳ ಹಿಂದೆ ಶಶಿಕಲಾ ವಸ್ತ್ರದ, ಮಾಲತಿ ಪಟ್ಟಣಶೆಟ್ಟಿ ಮುಂತಾದ ಕವಯಿತ್ರಿಯರು ಬರೆದದ್ದನ್ನು ಲಲಿತಾ ಈಗ ಬರೆಯುತ್ತಿದ್ದಾರೆಂದೆನಿಸುತ್ತದೆ.

ಡಾ॥ ಬಸವರಾಜ ಸಬರದ
(ಲಲಿತಾ ಅವರ ಕವನ ಸಂಗ್ರಹ ಕುರಿತು)

ಶಬಾನಾ ಪುರುಷ ಪ್ರಧಾನ ಚಿತ್ರರಂಗದಲ್ಲೂ ಮಿಂಚುತ್ತಿದ್ದರೆ ಅದಕ್ಕೆ ಆಕೆಯಲ್ಲಿನ ಪ್ರತಿಭೆಯೇ ಕಾರಣ.

ಸುಧಾ ವಾರಪತ್ರಿಕೆ.

ಚಿತ್ರರಂಗದಲ್ಲಿ ಪುರುಷರದೇ ಪ್ರಾಧಾನ್ಯ. ಅವರ ಒಲವು ಯಾರಿಗೆ ಇರುತ್ತದೆಯೋ ಅವರಿಗೆ ಧಾರಾಳ ಅವಕಾಶ. ನಮ್ಮಂಥ ನಟಿಯರು ಎಷ್ಟು ಬೇಗ ಇದನ್ನು ತಿಳಿದರೆ ಅಷ್ಟು ಒಳ್ಳೆಯದು.

ತನುಜಾ.
ಹಿಂದಿ ಚಲನ ಚಿತ್ರನಟಿ

ಗಂಡು ಹೆಣ್ಣು ಪರಸ್ಪರ ಗೌರವ, ಮರ್ಯಾದೆ ಮತ್ತು ಸ್ವಾತಂತ್ರ್ಯ ಇಟ್ಟುಕೊಂಡು ಒಂದಾಗಿ ಬಾಳೋದು ಮುಖ್ಯ. ಒಬ್ಬರು ಮತ್ತೊಬ್ಬರನ್ನು ಆಶ್ರಯಿಸೋದು 'ಮದುವೆ' ಆದರೆ, ವೈಯಕ್ತಿಕ ಸ್ವಾತಂತ್ರ್ಯ ಇಲ್ಲದೆ ಹೋದರೆ ಅದು ಒಲ್ಲದವರ ಜತೆ ಒತ್ತಾಯದ ಬದುಕು.

ಗಾಯತ್ರಿ
ಸಿನಿಮಾ ನಟಿ.

ಪಂಚಾಯ್ತಿ ರಾಜ್ಯದಲ್ಲಿ ಮಹಿಳೆಯರಿಗೆ 30ರಷ್ಟು ಪ್ರಾತಿನಿಧ್ಯ ನೀಡುತ್ತೇವೆಂದು ಹೇಳಿದ್ದೇನೆ. ಈಗಿನ ಚುನಾವಣೆಯಲ್ಲೂ ಮಹಿಳೆಯರಿಗೆ ಟಿಕೆಟ್ ನೀಡಲು ಪ್ರಯತ್ನಿಸಿದರು ಆದರೆ ಅರ್ಹತೆಯಿರುವ ಮಹಿಳೆಯರೇ ಸಾಕಷ್ಟು ಸಂಖ್ಯೆಯಲ್ಲಿ ದೊರೆಯಲಿಲ್ಲ.

ರಾಜೀವ್ ಗಾಂಧಿ.

ಪುರುಷ ಪ್ರಧಾನ ಸಮಾಜದಲ್ಲಿ ಸಂಪ್ರದಾಯಗಳ ಸಂಕೋಲೆಯೊಳಗೆ ಬಂಧಿತಳಾಗಿದ್ದ ಸ್ತ್ರೀ ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದ ಈಚಿನ ದಶಕಗಳಲ್ಲಿ ವೈಚಾರಿಕ ಪ್ರವೃತ್ತಿಯನ್ನು ಬೆಳೆಸಿಕೊಂಡು ವಿಚಾರ ಸಾಹಿತ್ಯ ರಚನೆಯಲ್ಲಿ ಅಷ್ಟಿಷ್ಟು ತೊಡಗಿದ್ದಾಳೆ ಎನ್ನುವುದೆ ಮಹತ್ವದ ಸಂಗತಿ.

ಟಿ. ಸುನಂದಮ್ಮ.

ಲೇಖಕಿಯರು ಸ್ವಪ್ರಜ್ಞೆಯ ಚೌಕಟ್ಟಿನಿಂದ ಮೇಲೆ ಬಂದು ವ್ಯಕ್ತಿ ಪ್ರಜ್ಞೆ, ಮಾನವ ಪ್ರಜ್ಞೆಯನ್ನು ಬೆಳೆಸಿಕೊಳ್ಳದ ಹೊರತು ಮಹಿಳಾ ಸಾಹಿತ್ಯ ಪ್ರಗತಿ ಸಾಧಿಸದು.

ಚಿ. ನ. ಮಂಗಳಾ

ನಾನು ಒಳ್ಳೆಯ, ಸುರಕ್ಷಿತ ಹಾಗೂ ಬೇಸರಿಸಿಕೊಂಡಿರುವ ಹೆಣ್ಣಿಗಿಂತ ಸಾಹಸಮಯಳಾಗಿರುವುದನ್ನು ಇಷ್ಟಪಡುತ್ತೇನೆ.

ದಿ॥ ಸ್ಮಿತಾ ಪಾಟೀಲ್
(ಇಂಡಿಯಾ ಟುಡೇ)

ಹೆಣ್ಣಿನ ತ್ಯಾಗ, ಅವಲಂಬನೆ, ದುರಂತ ಪ್ರೇಮ, ಅಸಹಾಯಕತೆಗಳನ್ನು ಪ್ರಸ್ತಾಪಿಸಿದರೂ ಅದನ್ನು ಸಾಂಪ್ರದಾಯಿಕ ಗೋಳುಕರೆಯಿಂದ ತಪ್ಪಿಸಿ ಹೊಸ ಬೆಳಕಿನಲ್ಲಿ ಮನುಷ್ಯ ಸಂಬಂಧಗಳ, ಮುಖ್ಯವಾಗಿ 'ಹೆಣ್ಣಿನ ಆಶೋತ್ತರಗಳ ಬಗ್ಗೆ ಚಿಂತಿಸಹೊರಟಿರುವುದೇ ಮಾಲತಿ ಪಟ್ಟಣಶೆಟ್ಟಿಯವರ ಕತೆಗಳಲ್ಲಿನ ಒಂದು ಇತ್ಯಾತ್ಮಕ ಅಂಶವಾಗಿದೆ.

ಟಿ. ಪಿ. ಅಶೋಕ
(ಮಾಲತಿ ಪಟ್ಟಣಶೆಟ್ಟಿಯವರ ಇಂದು ನಿನ್ನಿನ ಕಥೆಗಳು–ಕಥಾ ಸಂಕಲನ ಕುರಿತು)

# ಓದುಗರ ವಿಭಾಗ

ಸಮಾಜದಲ್ಲಿ ಮಹಿಳೆಯರ ಮೇಲೆ ನಡೆಯುವ ಅನ್ಯಾಯ, ಅತ್ಯಾಚಾರಗಳನ್ನು ಎತ್ತಿ ಹಿಡಿಯುವ ಪತ್ರಿಕೆ ದೊರೆಯಿತಲ್ಲಾ ಎಂಬ ಹೆಮ್ಮೆ ನನಗಿದೆ.

ಹಂಸಗೀತೆ ಮುಧೋಳ
ವಿಜಾಪುರ.

ಶತಮಾನಗಳಿಂದ ಶೋಷಣೆಗೊಳಗಾಗಿರುವ, ಒಳಗಾಗುತ್ತಿರುವ, ಒಳಗಾಗುವ ಹೆಣ್ಣಿನ ಬಗ್ಗೆ ನಿಮ್ಮ ಧ್ವನಿ ಸ್ವಾಗತಾರ್ಹ.

ಎಲ್. ರಮೇಶ್
ಮಾದಾಪಟ್ಟಣ.

ಜಗತ್ತಿನ ಪ್ರಥಮ ಶೋಷಿತೆಯ ಪ್ರನಿಧಿಯಾದ ನೀವು ಸೋಲುಗಳ ನಡುವೆಯೇ ನಿಮ್ಮ ಕನಸಿನ ಕೂಸು "ಮಾನಸ" ವನ್ನು ಬೆಳಸಿರಿ.

ಡೀಕಯ್ಯ
ಸುಳ್ಯ

ಮಾನಸ ತಿಂಗಳಿಂದ ತಿಂಗಳಿಗೆ ವಿಶಿಷ್ಟವಾಗುತ್ತಿರುವುದು ನನಗಂತೂ ಹೆಮ್ಮೆಯನ್ನುಂಟು ಮಾಡಿದೆ. ಯಾವುದೇ ಕಾರಣಕ್ಕೂ, ಸಮಸ್ಯೆಗೂ ಕುಂದದೆ ನಿಮ್ಮ ಹೆಜ್ಜೆಯನ್ನು ಇನ್ನೂ ಮುಂದೆ ಮುಂದೆ ಹಾಕಿ. ನಿಮ್ಮ ಬಳಗದೊಡನೆ ಹೆಗಲುಕೊಡಲು ನಾವು ಕೂಡಾ ಸದಾ ಸಿದ್ಧರಿದ್ದೇವೆ. ಮಾನಸ ಈ ನೆಲದ ಜನರ ಮನೆ ಮಾತಾಗಲಿ.

ದಿನೇಶ್ ಸುದರ್ಶನ,
ದಿನೇಶ್ ಪತ್ರಿಕೆಯ ಪರವಾಗಿ.

ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ತೆಲಂಗಾಣದ ವೀರವನಿತೆಯರ ಬಗ್ಗೆ ಲೇಖನ ಮನ ಕರಗುತ್ತದೆ. ಚಂಪಾವತಿಯವರ "ಗೆಳತಿಯೊಂದಿಗೆ ಸಂವಾದ" ಮನ ತಟ್ಟುವಂತಿದ್ದು ಇಂದಿರಾ ಯಗಟಿಯವರ "ಪಕ್ಷಿನೋಟ" ಕವನ ಅರ್ಥಪೂರ್ಣವಾಗಿದೆ.

ಕಟಪಿ ಹೇಮಾತ್ರೀ

ಮಾನಸ ವಿಶೇಷ ಸಂಚಿಕೆ ಚೆನ್ನಾಗಿ ಮೂಡಿ ಬಂದಿದೆ.

ಪ್ರೇಮಾ
ಹೊಸಕೊಪ್ಪ

ನಿಮ್ಮ ಮಾನಸ ಪತ್ರಿಕೆಯು ತುಂಬಾ ಚೆನ್ನಾಗಿದೆ. ಆದರಲ್ಲಿಯೂ "ನಮಗರಿಯದ ನಮ್ಮ ಚರಿತ್ರೆ" ಎಂಬುದು ಪರಿಪೂರ್ಣವಾಗಿದೆ ಹಾಗೂ ಸುಂದರವಾಗಿಯೂ ಮೂಡಿ ಬಂದಿದೆ. ಇದೇ ತರಹದ ಲೇಖನಗಳು ಮೂಡಿ ಬರಲಿ.

ಎನ್. ನಾಗಮಣಿ
ಕಾಡುಗೋಡಿ

ನಿಮ್ಮ ಈ ಪತ್ರಿಕೆಯನ್ನು ಸ್ತ್ರೀಯರ ಮತ್ತು ಪುರುಷರ ಮನದಲ್ಲಿ ಒಳ್ಳೆಯ ಪರಿಣಾಮ ಬೀರಲಿ.

ನಜಹತ್ ಶಾಹೀನ್
ಕಾಡುಗೋಡಿ.

ನಿಮ್ಮ ಪತ್ರಿಕೆ ಯಶಸ್ವಿ ಮಾರ್ಗದತ್ತ ಮುನ್ನಡೆಯಲಿ ಎಂದು ಹಾರೈಸುವೆ.

ಯು. ಆರ್. ಲಲಿತಾ



## ಓದುಗರಲ್ಲಿ ಮನವಿ

ಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀಯರ ಧ್ವನಿಯಾದ ಮಾನಸ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದರೂ, ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಲು ಸಾಧ್ಯವಾಗದೆ ಇರುವುದನ್ನು ನೀವು ಈಗಾಗಲೇ ಗಮನಿಸಿರಬಹುದು.

ನಮ್ಮೆಲ್ಲರ ಪ್ರಾಮಾಣಿಕ ಪ್ರಯತ್ನವನ್ನೂ ಮೀರಿ ಅಡಿಗಡಿಗೆ ಎದುರಾಗುವ ಸಮಸ್ಯೆಯಿಂದಾಗಿ ಪತ್ರಿಕೆ ತುಂಬಾ ವಿಳಂಬ ಗತಿಯಲ್ಲಿ ಪ್ರಕಟವಾಗುತ್ತಿದೆ. ಪತ್ರಿಕೆಯ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಒಂದು ಪುಟ್ಟದಾದ ಅಚ್ಚುಮೊಳೆಯ ಕೇಂದ್ರವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಇದರ ಖರ್ಚು ವೆಚ್ಚಗಳೊಂದಿಗೆ ಬಾಡಿಗೆಗೆ ಹಣ ಹೊಂದಿಸುವುದು ದುಸ್ತರವಾಗುತ್ತಿದೆ. ಈ ಹಂತದಲ್ಲಿ ಪತ್ರಿಕೆಯ ಆತ್ಮೀಯ ಹಿತೈಷಿಗಳಾದ ನಿಮಗೆ ಈ ಕೆಳಗಿನ ಕಳಕಳಿಯ ಮನವಿಯನ್ನು ಮಾಡುತ್ತಿದ್ದೇವೆ. ಪ್ರತಿ ತಿಂಗಳೂ ಮಾನಸ ಆಫೀಸ್ ಬಾಡಿಗೆಗೆಂದು ರೂ. 5-00 ಕಳಿಸಲು ಸಾಧ್ಯವೆ? ಪ್ರತಿ ತಿಂಗಳೂ ಕಳಿಸುವುದು ಸಮಸ್ಯೆಯೆನಿಸಿದರೆ, ಅರ್ಧ ವರ್ಷದ ಅಂದರೆ ರೂ. 30-00 ಅಥವಾ ಒಂದು ವರ್ಷದ ರೂ. 60-00 ಒಟ್ಟಿಗೆ ಕಳಿಸಬಹುದು. ನಮ್ಮ ಈ ಕಿರು ಪ್ರಯತ್ನಕ್ಕೆ ನಿಮ್ಮ ಬೆಂಬಲ ಮತ್ತು ಪ್ರೋತ್ಸಾಹವಿದೆಯೆಂಬ ಭರವಸೆ ನಮಗಿದೆ.

'ಮಾನಸ' ದೊಡನೆ ನಿಮ್ಮ ಪತ್ರ ವ್ಯವಹಾರದಲ್ಲಿ ಪ್ರತಿ ಬಾರಿಯೂ ನಿಮ್ಮ ವಿಳಾಸವನ್ನು ಬರೆಯಿರಿ. ಅನಾವಶ್ಯಕವಾಗಿ ಗೊಂದಲ ಕಡಿಮೆ ಆಗುವುದಲ್ಲದೇ, ತಕ್ಷಣ ಪತ್ರಿಸಲು ನಮಗೂ ಸಹಾಯಕವಾಗುತ್ತದೆ. ಜೊತೆಗೆ ವಿಳಾಸದಲ್ಲಿನ ಬದಲಾವಣೆಗಳು ಗಮನಕ್ಕೆ ಬರುತ್ತವೆ.

## ಚಂದಾದಾರರಾಗಿ

ನಿಮ್ಮ ಪ್ರೋತ್ಸಾಹ ಮತ್ತು ಸಹಕಾರಗಳಿಂದಲೇ 'ಮಾನಸ' ವನ್ನು ಪ್ರತಿತಿಂಗಳು ಕ್ರಮಬದ್ಧವಾಗಿ ಪ್ರಕಟಿಸಲು ಸಾಧ್ಯ. ನಿಮ್ಮ ಗೆಳೆಯ, ಗೆಳತಿಯರಿಗೆ ಪತ್ರಿಕೆಯನ್ನು ಪರಿಚಯಿಸಿ ಚಂದಾದಾರರನ್ನಾಗಿಸಿ. ಆಜೀವ ಚಂದಾದಾರರಾಗಿ ( 50 ರೂ) ಪತ್ರಿಕೆಯ ಸ್ವಾವಲಂಬನೆಗೆ ಸಹಾಯಕರಾಗಿ.

## ಗ್ರ್ಯಾಫಿಕ್ಸ್

ನೀವು ಮಾನಸ ತಿಂಗಳ ಪತ್ರಿಕೆಯ ಮುಖಪುಟ ಹಾಗೂ ಒಳಗಿನ ಪುಟಗಳ ಗ್ರ್ಯಾಫಿಕ್ಸ್ ಗಮನಿಸಿರಬಹುದು. ಪ್ರತಿ ಸಂಚಿಕೆಯಲ್ಲೂ ಹೀಗೆ ಪ್ರತಿ ಲೇಖನಕ್ಕೆ ಹಾಗೂ ಅಂಕಣಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ಪ್ರಕಟಿಸಲಾಗುವುದು. ನೀವು ಕಲಾವಿದರಾಗಿದ್ದರೆ ನಿಮ್ಮ ರಚನೆಗಳನ್ನು 'ಮಾನಸ' ಪ್ರಕಟಣೆಗೆ ಕಳಿಸಿ.

---

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ ಕಾಡುಗೋಡಿ ಅಂಚೆ ಬೆಂಗಳೂರು ೫೬೦೦೬೭

ನಂ ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್ : 284/8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : " ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು – 560067

ಸೂಚನೆ:
ಬಿಡಿಪ್ರತಿ: 2 ರೂ.
ವಾರ್ಷಿಕ ಚಂದಾ : 20 ರೂ.
ಆಜೀವ ಚಂದಾ : 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ ಒಟ್ಟು ಹನ್ನೊಂದು ಸಂಚಿಕೆಗಳು. ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ. ಮೂಲಕ ಸ್ವೀಕರಿಸಲಾಗುವುದು.